*Department of Public Instruction, Mysore*

# ಕಥಾವಳಿ

ಎರಡನೆಯ ಭಾಗ

ಇದು

ಬಿ. ಸುಬ್ಬರಾವ್, ಬಿ.ಎ. ಯವರಿಂದ

ವಿರಚಿತವಾದುದು

ನಾಲ್ಕನೆಯ ಮುದ್ರಣ ೫೦೦ ಪ್ರತಿಗಳು



ಮೈಸೂರು

ಕ್ರೌನ್ ಎಲೆಕ್ಟ್ರಿಕ್ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟುದು

1929

# ಪೀಠಿಕೆ

ಕಥಾವಳಿಯ ಮೊದಲನೆಯ ಭಾಗದಲ್ಲಿ ಮಕ್ಕಳ ದೃಷ್ಟಿಗೆ ಸಾಮಾನ್ಯವಾಗಿ ಬೀಳುವ ಪಶು ಪಕ್ಷಿಗಳ ವಿಚಾರವಾದ ಸಸ್ಯಾದಿಗಳಮೇಲಿನ, ಹಬ್ಬ ಹರಿ ದಿನಗಳನ್ನು ಕುರಿತ ಕಥೆಗಳೂ, ಮನೋವಿಕಾಸವನ್ನುಂಟುಮಾಡುವ ಕಲ್ಪನಾ ಕಥೆಗಳೂ ಬರೆಯಲ್ಪಟ್ಟಿವೆ.

ಎರಡನೆಯ ಭಾಗವಾದ ಈ ಪುಸ್ತಕದಲ್ಲಿ ಬಾಲಕರು ಸಾಧಾರಣವಾಗಿ ನೋಡಲವಕಾಶವಿಲ್ಲದ ಆನೆ, ಹುಲಿ, ಕರಡಿ ಮುಂತಾದ ಮೃಗಗಳ ವಿಚಾರವಾಗಿಯೂ, ನಾನಾ ದೇಶಗಳಲ್ಲಿ ಪ್ರಸಿದ್ಧಿಗೊಂಡಿರುವ ಪ್ರಖ್ಯಾತ ಪುರುಷರ ವಿಷಯವಾಗಿಯೂ, ಸ್ವಾಮಿ ಭಕ್ತಿ ದೇಶಾಭಿಮಾನ, ಸ್ನೇಹಭಾವ, ಭ್ರಾತೃವಾತ್ಸಲ್ಯ ಇವೇ ಮುಂತಾದ ಸದ್ಗುಣಗಳಿಗೆ ಹೆಸರುವಾಸಿಯಾದವರ ಪರವಾಗಿಯೂ ಕೆಲಕೆಲ ಕಥೆಗಳು ಬರೆಯಲ್ಪಟ್ಟಿವೆ

ಬಾಲಕರಲ್ಲಿ ಅಡಗಿರುವ ಸಹಜವಾದ ಧೈರ್ಯ, ಸ್ಥೈರ್ಯ, ದಯೆ ದಾಕ್ಷಿಣ್ಯಾದಿ ಗುಣ ವಿಶೇಷಗಳು ಮಹಾತ್ಮರ ಚರಿತ್ರ ಕಥನದಿಂದ ವಿಕಾಸಹೊಂದಲು ಅವಕಾಶವಿರುವುದು ಬಾಲಕರ ಕಲ್ಪನಾಶಕ್ತಿಯು ವರ್ಣನಾ ಭಾಗವೇ ವಿಶೇಷವಾಗಿರುವ ಕಟ್ಟು ಕಥೆಗಳನ್ನು ಕೇಳೋಣದರಿಂದ ವೃದ್ಧಿಗೊಳ್ಳಬಹುದು. ವಿನೋದವಾದ ಕಥೆಗಳಿಂದ ಬಾಲಕರ ಮನಸ್ಸಿನ ಬೇಸರವು ಮಾಯವಾಗಬಹುದು ಆದುದರಿಂದ ಕಥೆಯನ್ನು ಕೇಳತಕ್ಕವರು ಬಾಲಕರ ಮನೋವೃತ್ತಿಯನ್ನರಿತು ಸಮಯೋಚಿತವಾಗಿ ಇಲ್ಲಿ ದೊರೆಯುವ ಕಥೆಗಳಲ್ಲೊಂದನ್ನು ಹೇಳಬಹುದು ಈ ಪುಸ್ತಕದಲ್ಲಿರುವ ಕಥಾಕ್ರಮವನ್ನೇ ಆಗಲಿ ಶೈಲಿಯನ್ನೇ ಆಗಲಿ ಅನುಸರಿಸಿ ಹೇಳಬೇಕಾದ ಆವಶ್ಯಕತೆ ಇರುವುದಿಲ್ಲ ಮಕ್ಕಳ ಮನಮುಟ್ಟುವಂತೆ ಕಥೆಗಳನ್ನು ಹೇಳಿದರೆ ಆಯಿತು ಅದರಿಂದ ಅವರ ಮನಸ್ಸಿನಲ್ಲುಂಟಾದ ಸಂತೋಷವು ಮುಖದಲ್ಲಿ ಪ್ರಕಾಶಗೊಂಡರೆ ಸಾಕಾಗಿರುವುದು ಕೆಲವರು ಕಥಾಸ್ವಾರಸ್ಯವನ್ನು ಗ್ರಹಿಸದಿದ್ದರೂ ಜತೆಯಲ್ಲಿರುವವರು ಸ್ವಾರಸ್ಯವನ್ನು ಗ್ರಹಿಸಿ ತೋರಿಸುವ ಅನುಭವಗಳನ್ನು ಮಾತ್ರ ಅನುಕರಿಸುವುದುಂಟು ಕಥೆಯನ್ನು ಹೇಳುವವರು ಅಷ್ಟಕ್ಕೆ ತೃಪ್ತರಾಗದೆ ಆಗಾಗ ಅಲ್ಲಲ್ಲೇ ಬಾಲಕರನ್ನು ಪ್ರಶ್ನೆಮಾಡಿ ವಿಷಯವನ್ನು ನಿಶ್ಚಯವಾಗಿ ಗ್ರಹಿಸುತ್ತಿರುವರೆಂದು ಗೊತ್ತುಮಾಡಿಕೊಳ್ಳಬೇಕು. ಮೃಗಾದಿಗಳ ವಿಚಾರವಾಗಿ ಹೇಳುವಾಗ ಅವುಗಳ ಭಾವಚಿತ್ರಗಳನ್ನು ಅಗತ್ಯವಾಗಿ ಉಪಯೋಗಿಸಬೇಕು. ಮೃಗಗಳ ಸ್ವಭಾವವನ್ನೂ ಮನುಷ್ಯನ ಮನೋವ್ಯಾಪಾರವನ್ನೂ ಸಂದರ್ಭಾನುಸಾರವಾಗಿ ಸ್ಪಷ್ಟಗೊಳಿಸಬೇಕು. ಕಥಾ ತಾತ್ಪರ್ಯವನ್ನು ಬೋಧನಾರ್ಥವಾದ ಪ್ರಶ್ನೆಗಳ ಮೂಲಕ ಬಾಲಕರಿಂದಲೇ ಹೇಳಿಸಬೇಕು ಆವೃತ್ತಿ ರೂಪವಾಗಿ ಸ್ವಲ್ಪ ಸ್ವಲ್ಪ ಕಥಾಭಾಗವನ್ನು ಮಕ್ಕಳಿಂದ ಹೇಳಿಸಿ ಮುಗಿಸಬೇಕು ಬರೆವುದಕ್ಕೆ ಬಂದ ಹುಡುಗರಿಂದ ಹೇಳಿದ ಕಥೆಯ ಸಾರಾಂಶವನ್ನು ಬರೆಯಿಸಬೇಕು.

ಮುಖ್ಯವಾಗಿ ಮಕ್ಕಳಿಗೆ ಕಥೆಗಳನ್ನು ಕಲಿಸುವ ಮಾರ್ಗವು ಮುಂದಕ್ಕೆ ಅವರು ದೊಡ್ಡವರಾದಾಗ ಲೋಕವ್ಯವಹಾರದಲ್ಲಿ ಆಗಾಗ ಆ ಕಥೆಗಳು ಸ್ಮೃತಿಗೆ ಬಂದು ಉಪಯುಕ್ತವಾಗುವುದಕ್ಕೆ ಸಹಕಾರಿಯಾಗಿರಬೇಕು.

ಬಾಪು ಸುಬ್ಬರಾವ್.

# ಕಥಾವಳಿ

## ಎರಡನೆಯ ಭಾಗ

ವಿಷಯಾನುಕ್ರಮಣಿಕೆ

# ಕಥಾವಳಿ

---

## ಎರಡನೆಯ ಭಾಗ

---

### ೧ ಕಾಗೆಯ ಉಪಾಯ

ನಡುಬೇಸಗೆ, ಮಟಮಟ ಮಧ್ಯಾಹ್ನ, ಬಲುಬಿಸಿಲು, ಎಲ್ಲೆಲ್ಲಿಯೂ ನೀರಿಲ್ಲ ಹೀಗಿರುವಾಗ ಬಾಯಾರಿಕೆಯಿಂದ ಬಹು ಸಂಕಟಪಡುತ್ತಿದ್ದ ಕಾಗೆಯೊಂದು, ಬಳಲಿ ಬೇಸತ್ತು ಎಲ್ಲಾದರೂ ನೀರು ಸಿಕ್ಕೀತೇ! ಎಂದು ಒದೆದಾಡುತ್ತ, ಒಂದು ಮನೆಯ ಅಂಗಳದಲ್ಲಿ ಒಂದು ಪಾತ್ರೆಯಿದ್ದುದನ್ನು ನೋಡಿ ಹಾರಿಬಂದಿತು ಆ ಪಾತ್ರೆಯಲ್ಲಿ ಸ್ವಲ್ಪ ನೀರು ಇದ್ದುದನ್ನು ಕಂಡು ನೀರನ್ನು ಹಾಗೆಯೇ ಕುಡಿಯಲು ಪ್ರಯತ್ನಪಟ್ಟಿತು ಕಾಗೆಯ ಕೊಕ್ಕಿಗೆ ನೀರು ಸಿಕ್ಕಲಿಲ್ಲ ಪಾತ್ರೆಯನ್ನು ಬಗ್ಗಿಸಿಯಾದರೂ ಕುಡಿಯೋಣವೆಂದು ನೋಡಿತು ಅದೂ ಆಗಲಿಲ್ಲ.

ಬಾಯಾರಿಕೆಯಾದರೋ ಬಹಳ ಆಗ ಕಾಗೆಯು ಕುತ್ತಿಗೆಯನ್ನು ಇತ್ತಲೂ ಅತ್ತಲೂ ತಿರುಗಿಸಿ, ಹತ್ತಿರ ಬಿದ್ದಿದ್ದ ಸಣ್ಣಸಣ್ಣ ಕಲ್ಲುಗಳನ್ನು ಒಂದೊಂದನ್ನಾಗಿ ಆರಿಸಿ ತಂದು ಆ ಪಾತ್ರೆಗೆ ಹಾಕಿತು ಅದರಿಂದ ಆ ಪಾತ್ರೆಯಲ್ಲಿದ್ದ ನೀರು ಸ್ವಲ್ಪ ಮೇಲಕ್ಕೆ ಬಂದಿತು ಆಗ ನೀರನ್ನು ಕುಡಿದು ದಣಿದು, ಕಾ! ಕಾ! ಎಂದು, ಕೂಗಿಕೊಂಡಿತು

---

### ೨. ಕೋಳಿಯ ಎಚ್ಚರಿಕೆ

ಒಬ್ಬ ರೈತನ ಹಿತ್ತಿಲಿನಲ್ಲಿ ಒಂದು ಕೋಳಿಯು ತನ್ನ ಮರಿಗಳೊಡನೆ ತಿರುಗಾಡುತ್ತಿದ್ದಿತು ಅದನ್ನು ಒಂದು ನರಿಯು ನೋಡಿ, ಹೇಗಾದರೂ ಮಾಡಿ ಒಂದು ಮರಿಯನ್ನು ಎತ್ತಿಕೊಂಡು ಹೋಗಬೇಕೆಂದು ಚಿಂತಿಸಿ ಒಂದು ಯುಕ್ತಿ ಮಾಡಿತು. ನರಿಯು ಆ ಅಂಗಳದ ಹತ್ತಿರ ಮೆಲ್ಲಗೆ ಹೋಗಿ, ಅಲ್ಲಿ ನಾಯಿ ಇಲ್ಲದಿದ್ದುದನ್ನು ನೋಡಿ,—' ಕೋಳಿ! ಕೋಳಿ! ಈ ಸುದ್ದಿಯನ್ನು ನೀನು ಕೇಳಿಯೇ ಇಲ್ಲವೆ? ಇನ್ನುಮೇಲೆ ನಾವೆಲ್ಲ ಒಟ್ಟಾಗಿ ಸೇರಿ, ಸುಖವಾಗಿ ಆಡಿಕೊಂಡಿರಬಹುದು! ಆ ಹುಲಿರಾಯ ಮಹಾರಾಯ. ನಿನ್ನೆ ಗಜರಾಜ, ಹುಲಿರಾಯ

ಮುಂತಾದವರೆಲ್ಲ ಸೇರಿ, ಇನ್ನು ಮೇಲೆ, ಪ್ರಾಣಿಗಳನ್ನು ಹಿಂಸೆಮಾಡಿ ಕೊಂದು ತಿನ್ನ ಕೂಡದು, ಎಂದು ಗೊತ್ತುಮಾಡಿದರು ಇನ್ನು ಭಯವೇಕೆ? ನಿನ್ನ ಮರಿಗಳೊಡನೆ ಹೊರಕ್ಕೆ ಬಾ!'—ಎಂದು ಹೇಳಿತು

ಇದು ನರಿಯ ಉಪಾಯವೆಂದು ಕೋಳಿಗೆ ತೋರಿತು ಆಗ ಕೋಳಿಯು ಚೆನ್ನಾಗಿ ನಿಂತು, ಯಾರೋ ಬರುತ್ತಿರುವುದನ್ನು ನೋಡುವಂತೆ ಉದ್ದವಾದ ತನ್ನ ಕತ್ತನ್ನು ಎತ್ತಿ, ರೆಕ್ಕೆಯನ್ನು ಬಡಿದು ಸುತ್ತೂ ನೋಡಿತು 'ಅದೇನು? ನೀನು ನೋಡುವುದು?' ಎಂದು ನರಿಯು ಕೇಳಲು, ಅಲ್ಲೆಲ್ಲೋ ನಮ್ಮ ನಾಯಿ ಬರುವಂತಿದೆ' ಎಂದು ಹೇಳಿ, ಕೊ, ಕೊ, ಕೋ!!! ಎಂದು ಗಟ್ಟಿಯಾಗಿ ಕೂಗಿಕೊಂಡಿತು ಕೂಡಲೆ ಮರಿಗಳೂ ಕೂಗಿಕೊಂಡುವು

ಆಗ ನರಿಯು ಬಾಲವನ್ನು ಮುದುರಿಕೊಂಡು ಒಂದೆರಡು ಹಜ್ಜೆಗಳನು ಇಟ್ಟಿತು ನರಿಯು ಹಿಂದಕ್ಕೆ ಸರಿದುದನ್ನು ನೋಡಿ ಕೋಳಿಯು 'ಓಹೋ! ಇದೇನು! ಎಲ್ಲರೂ ಸ್ನೇಹಿತರೆಂದು ಹೇಳಿದೆಯಲ್ಲಾ' ಎನ್ನಲು, 'ಹೌದು, ನಿಮ್ಮ ನಾಯಿಗೆ, ಇದು ತಿಳಿದು ಇದೆಯೋ ಇಲ್ಲವೋ?' ಎಂದುಕೊಂಡು ಓಡಿತು

-- --- --

## ೨. ಇಲಿಯ ಸಹಾಯ

ಒಂದು ದೊಡ್ಡ ಕಾಡು, ಆ ಕಾಡಿನಲ್ಲಿ ಒಂದು ಬಂಡೆ, ಆ ಬಂಡೆಯಲ್ಲಿ ಒಂದು ಗುಹೆ, ಆ ಗುಹೆಯ ಬಾಗಿಲಲ್ಲಿ ಒಂದು ಸಿಂಹವು ಎಳೆಯ ಬಿಸಿಲನ್ನು ಕಾಯಿಸಿಕೊಳ್ಳುತ್ತ ಮಲಗಿದ್ದಿತು ಅದು ಆಗಾಗ ಬಾಯಿಯನ್ನು ದೊಡ್ಡದಾಗಿ ತೆರೆಯುತ್ತ ಸ್ವಲ್ಪ ಶಬ್ದವಾದರೂ ಸುತ್ತುಮುತ್ತೂ ನೋಡುತ್ತ ಬಾಲವನ್ನು ಮೆಲ್ಲಗೆ ನೆಲದ ಮೇಲೆ ಬಡಿಯುತ್ತ ಇದ್ದಿತು.

ಆ ಬಂಡೆಯ ಹತ್ತಿರ ಒಂದು ನೇರಿಳೆಯ ಮರವಿದ್ದಿತು. ಆ ಮರದಿಂದ ಉದಿರಿದ ಹಣ್ಣುಗಳನ್ನು ತಿಂದುಕೊಂಡು ಅಲ್ಲಿ ಕೆಲವು ಇಲಿಗಳಿದ್ದುವು ಆ ದಿನ ಒಂದು ಇಲಿಯು ಸಿಂಹದ ಹತ್ತಿರಕ್ಕೆ ಹೋಯಿತು ಕೂಡಲೆ ಸಿಂಹವು ಅದಕ್ಕೆ ಒಂದು ಏಟುಹಾಕಲು ಕೈಯೆತ್ತಿತು ಆಗ ಆ ಇಲಿಯು ಸಿಂಹವನ್ನು ಕುರಿತು 'ಅಯ್ಯಾ! ನೀವು ಬಹಳ ದೊಡ್ಡವರು. ನೀವೆಲ್ಲಿ? ನಾನೆಲ್ಲಿ? ನೀವು ನಿಮ್ಮ ಕೈಯನ್ನು ನನ್ನ ಮೇಲೆ ಇಟ್ಟರೆ ಸಾಕು. ನಾನು ಅಪ್ಪಚ್ಚಿಯಾಗುವೆನು ನನ್ನನ್ನು ಕೊಲ್ಲದೆ ಬಿಡಿ. ಸಮಯ ಬಿದ್ದಾಗ ನಿಮಗೂ ನಾನು ಬೇಕಾಗುವೆನು' ಎಂದು ಕಣ್ಣೀರನ್ನು ಬಿಡುತ್ತ ಕೇಳಿಕೊಳ್ಳಲು ಸಿಂಹವು ನಕ್ಕು ಬಿಟ್ಟುಬಿಟ್ಟಿತು.

ಕೆಲವು ದಿನಗಳು ಹೀಗೆಯೇ ಕಳೆದುವು. ಒಂದು ದಿನ ಬೇಡರು ಬಲವಾದ ಒಂದು ದೊಡ್ಡ ಬಲೆಯನ್ನು ಒಡ್ಡಿದರು ಆ ಬಲೆಗೆ ಈ ಸಿಂಹವೇ ಬಿದ್ದು ಅರಚಿಕೊಳ್ಳುತ್ತಿದ್ದಿತು. ಅಲ್ಲಲ್ಲಿಯೇ ಓಡಾಡುತ್ತಿದ್ದ ಈ ಇಲಿಯು ಅದನ್ನು ಕೇಳಿ, ಬೇಗ

ಓಡಿಹೋಗಿ, ಇತರ ಇಲಿಗಳನ್ನು ಕರೆತಂದು, ಮೆಲ್ಲಗೆ ಆ ಬಲೆಯನ್ನೆಲ್ಲ ತುಂಡು ತುಂಡಾಗಿ ಕತ್ತರಿಸಿ, ಸಿಂಹವನ್ನು ಬಿಡಿಸಿತು. ಆಗ ಸಿಂಹವು ನೆಗೆಯುತ್ತ ಹೊರಟು ಪೊದೆಗಳಲ್ಲಿ ನುಗ್ಗಿ ತಪ್ಪಿಸಿಕೊಂಡಿತು.

---

## ೪. ನಾಯಿಯ ನಂಬಿಕೆ

ಒಬ್ಬ ಸಾಹುಕಾರನಲ್ಲಿ ಒಂದು ನಾಯಿಯು ಇದ್ದಿತು. ಒಂದು ದಿನ ಬೆಳಗಿನಲ್ಲಿ ಆ ಸಾಹುಕಾರನು ಹಣವನ್ನು ಎಣಿಸುತ್ತ ಕುಳಿತ್ತಿದ್ದಾಗ ಆ ನಾಯಿಯೂ ಅಲ್ಲಿಯೇ ಕುಳಿತಿದ್ದಿತು ಆಗ ಆ ಸಾಹುಕಾರನ ಸ್ನೇಹಿತನೊಬ್ಬನು ಬರಲು, ಅವನು ಬೇಗಬೇಗ ಹಣವನ್ನು ಪೆಟ್ಟಿಗೆಗೆ ತುಂಬಿ, ಸ್ನೇಹಿತನೊಡನೆ ಹೊರಟುಹೋದನು

ಪೆಟ್ಟಿಗೆಗೆ ತುಂಬುವಾಗ ಒಂದು ರೂಪಾಯಿಯು ಉರುಳಿಹೋಗಿ ದೂರ ಬಿದ್ದಿತು ಅದನ್ನು ಆ ನಾಯಿಮಾತ್ರ ಕಂಡಿತು ಸಾಹುಕಾರನು ಆತುರವಾಗಿ ಹೊರಟುಹೋದನು ಆದುದರಿಂದ ನಾಯಿಯು ಆ ರೂಪಾಯಿಯನ್ನು ಬಾಯಿಯಲ್ಲಿ ಕಚ್ಚಿಕೊಂಡು, ಕೊನೆಗೆ ದವಡೆಯಲ್ಲಿ ಸೇರಿಸಿಕೊಂಡು ಕುಳಿತಿದ್ದಿತು

ನಾಯಿಗೆ ತಿಂಡಿ ಇಡುವ ಹೊತ್ತಾಗಲು ಎಂದಿನಂತೆ ತಿಂಡಿಯನ್ನು ತಂದಿಟ್ಟರು ನಾಯಿಯು ಅದನ್ನು ತಿನ್ನದೆ, ಅದರ ಮುಂದೆ ಬಾಲವನ್ನು ಅಲ್ಲಾಡಿಸುತ್ತ ಸುಮ್ಮನೆ ಕುಳಿತುಕೊಂಡಿತು ತಿಂಡಿಯನ್ನೂ ತಿನ್ನದು , ತಟ್ಟೆಯನ್ನೂ ಕೊಡದು

ಇಷ್ಟರಲ್ಲಿಯೇ ಸಾಹುಕಾರನು ಬಂದನು ನಾಯಿಯು ಬಾಲವನ್ನು ಅಲ್ಲಾಡಿಸುತ್ತ ಓಡಿಬಂದು, ತನ್ನ ಬಾಯಿಯಲ್ಲಿದ್ದ ರೂಪಾಯಿಯನ್ನು ಅವನ ಹತ್ತಿರ ಹಾಕಿಬಿಟ್ಟು ಹಿಂದಿರುಗಿ ಬಂದು ಗಬಗಬನೆ ತಿಂಡಿಯನ್ನು ತಿನ್ನಲಿಕ್ಕೆ ಮೊದಲುಮಾಡಿತು ತಾನು ಬಿಟ್ಟುಹೋದ ರೂಪಾಯಿ ಇರಬಹುದೆಂದು ಸಾಹುಕಾರನು ತಿಳಿದು ಸಂತೋಷದಿಂದ ನಾಯಿಯನ್ನು ತಟ್ಟಿದನು

---

## ೫. ಆನೆಯ ಸ್ನೇಹ

ಆನೆಗೊಂದಿ ಎಂದು ಒಂದು ಊರು ಆ ಊರಿನಲ್ಲಿ ಒಬ್ಬ ಸಾಹುಕಾರನಿದ್ದನು ಅವನಲ್ಲಿ ಒಂದು ಆನೆ ಇದ್ದಿತು ಅದನ್ನು ಸಾಕಲಿಕ್ಕೆ ಒಬ್ಬ ಮಾವತಿಗನಿದ್ದನು. ಅವನಿಗೆ ಒಂದೇ ಒಂದು ಮಗುವಿದ್ದಿತು ಆ ಮಾವತಿಗನ ಹೆಂಡತಿಯು ಮಗುವಿನ ತೊಟ್ಟಿಲನ್ನು ತಲೆಯಮೇಲೆ ಇಟ್ಟುಕೊಂಡು ತನ್ನ ಗಂಡನೊಡನೆ ಆನೆಯ ಕೆಲಸವನ್ನು ಮಾಡಲಿಕ್ಕೆ ಬರುತ್ತಿದ್ದಳು

ಆನೆಯ ಲಾಯಕ್ಕೆ ಬಂದು ಮಗುವಿನ ತೊಟ್ಟಿಲನ್ನು ಹತ್ತಿರದಲ್ಲಿಯೆ ಇಟ್ಟುಕೊಂಡು ಗಂಡಹೆಂಡರಿಬ್ಬರೂ ಕಸವನ್ನು ಎತ್ತುವುದು, ತಿಂಡಿಯನ್ನು ತಿನ್ನಿಸುವುದು,

ಇವೇ ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. ಮಗುವು ಅತ್ತಾಗ ತಾಯಿಯು ಮೆಲ್ಲಮೆಲ್ಲನೆ ತೊಟ್ಟಿಲನ್ನು ಅಲ್ಲಾಡಿಸುತ್ತ, ಮಗು ಸುಮ್ಮನಾದರೆ ತಿರುಗಿ ಕೆಲಸಕ್ಕೆ ಹೋಗುತ್ತ ಇದ್ದಳು

ಆನೆಯು ಇದನ್ನು ಕಂಡು ಆ ಮಗುವು ಅತ್ತ ಶಬ್ದವನ್ನು ಕೇಳಿದರೆ ಸೊಂಡಿಲಿನಿಂದ ಮೆಲ್ಲನೆ ತೊಟ್ಟಿಲನ್ನು ಅಲ್ಲಾಡಿಸುತ್ತ, ಅದು ಮಲಗಿರುವಾಗ ನೊಣಗಳು ಅದರ ಮೇಲೆ ಕುಳಿತರೆ ಸೊಂಡಿಲಿನಿಂದಲೆ ಅವನ್ನು ಓಡಿಸುತ್ತ ಮಗುವನ್ನು ನೋಡಿಕೊಳ್ಳುತಿದ್ದಿತು.

ಇದನ್ನು ತಿಳಿದು, ಅವರು ಮಗುವಿನ ತೊಟ್ಟಿಲನ್ನು ಸ್ವಲ್ಪವೂ ಹೆದರಿಕೆ ಇಲ್ಲದೆ ಆನೆಯ ಹತ್ತಿರ ಇರಿಸಿ ತಮ್ಮ ತಮ್ಮ ಕೆಲಸಕ್ಕೆ ಹೋಗುತ್ತಿದ್ದರು ಕೊನೆಕೊನೆಗೆ ಆನೆಯು ಆ ಮಗುವನ್ನು ಒಂದು ಗಳಿಗೆಯೂ ಬಿಟ್ಟು ಇರುತ್ತಿರಲಿಲ್ಲ ಮಗುವಿಲ್ಲದಿದ್ದರೆ ತನ್ನ ತಿಂಡಿಯನ್ನೇ ತಿನ್ನದು , ಅವರನ್ನು ಹತ್ತಿರವೇ ಸೇರಿಸದು , ಈ ರೀತಿಯಲ್ಲಿದ್ದಿತು.

ಸಾಹುಕಾರನು ಈ ಸುದ್ದಿಯನ್ನು ಕೇಳಿ, ನೋಡಿ, ಆ ಮಗುವಿಗೂ ಸಂಬಳವನ್ನು ಮಾಡಿಕೊಟ್ಟು, ಆನೆಯ ಜತೆಯಲ್ಲಿಯೇ ಮಗುವನ್ನು ಬಳೆಯಿಸಬೇಕೆಂದು ಹೇಳಿದನು. ಕೆಲವು ಕಾಲದಮೇಲೆ ಆ ಮಗುವಿನ ತಂದೆಯು ಸತ್ತುಹೋದನು. ಆಗ ಆ ಆನೆಯು ಆ ಮಗುವನ್ನಲ್ಲದೆ ಇತರರನ್ನು ಸೇರಿಸದಿದ್ದುದರಿಂದ ಆ ಹುಡುಗನೇ ಮಾವತಿಗನಾದನು. ಅವನು ಹೇಳಿದಂತೆ ಇದು ಕೇಳುತ್ತ ಅವನ ಕೈ ಮಗುವಂತೆ ಇರುತಿದ್ದಿತು.

---

## ೬. ಸ್ಪೈರಣೆ

ಚಿಕ್ಕೂರು ಎಂದು ಒಂದು ಗ್ರಾಮ ಆ ಗ್ರಾಮದಲ್ಲಿ ಶುಕ್ರವಾರ ಶುಕ್ರವಾರ, ಸಂತೆಯಾಗುತ್ತಿದ್ದಿತು ಮಗ್ಗಲು ಗ್ರಾಮದಲ್ಲಿದ್ದ ಇಬ್ಬರು ಜತೆಗಾತಿಯರು, ಆ ಸಂತೆಯಲ್ಲಿ ಮಾರುವುದಕ್ಕೆ ಭಾರವಾದ ಹಣ್ಣಿನ ಬುಟ್ಟಿಗಳನ್ನು ಹೊತ್ತುಕೊಂಡು ಹೋಗುತ್ತಿದ್ದರು. ಆಗ ಆ ಜತೆಗಾತಿಯರಲ್ಲಿ ಒಬ್ಬಳು ' ಎಲೆ, ಅಕ್ಕಾ ! ನಿನ್ನ ವಯಸ್ಸೂ ನನ್ನಷ್ಟೆ ನೀನು ಹೊತ್ತಿರುವ ಹೊರೆಯೂ ನನ್ನ ಹೊರೆಯಷ್ಟೇ ಇದೆ ನನಗಿಂತಲೂ ನೀನು ಬಲವಾಗಿಯೂ ಇಲ್ಲ ಆದರೂ ನೀನು ನಗುನಗುತ ಕಥೆಗಳನ್ನು ಹೇಳಿಕೊಂಡು ಬರುತ್ತೀಯೆ ನನಗಾದರೋ ಈ ಹೊರೆಯನ್ನು ಎಲ್ಲಾದರೂ ಇಟ್ಟುಬಿಡಲೇ, ಎಂಬಂತಿದೆ ಇದು ಏಕೆ ? ಹೇಳು ' ಎಂದು ಕೇಳಿದಳು.

ಅದಕ್ಕೆ ಜತೆಗಾರಳು, ' ಕೇಳಕ್ಕಾ ! ಅಳುತ್ತ ಹೊತ್ತುಕೊಂಡು ಹೋದರೂ ಹೊರೆಯ ಭಾರ ಒಂದೆ ! ನಗುತ್ತ ಹೊತ್ತರೂ ಒಂದೆ ! ಈಗ ನನ್ನ ಹೊರೆಯನ್ನು ನಾನೇ ಹೊರಬೇಕು. ಇದು ನಾನು ಮಾಡತಕ್ಕ ಕೆಲಸವೆಂದು ತಿಳಿದಿರುತ್ತೇನೆ. ಆದುದರಿಂದ ಈ ಹೊರೆ ನನಗೆ ಭಾರವಾಗಿ ತೋರುವುದಿಲ್ಲ. ಇದರ ಮೇಲೆ ನನ್ನಲ್ಲಿ

ಇನ್ನೊಂದು ಇದೆ ಅದರಿಂದ ನನಗೆ ಭಾರವೇ ತೋರುವುದಿಲ್ಲ,' ಎಂದಳು. ಅದಕ್ಕೆ ಇನ್ನೊಬ್ಬಳು 'ಅದೇನಕ್ಕಾ ನಿನ್ನಲ್ಲಿ ಹೆಚ್ಚಾಗಿ ಇರುವುದು, ಭಾರವನ್ನು ಕಡಿಮೆ ಮಾಡುವುದು? ನನಗೂ ಹೇಳು ದಮ್ಮಯ್ಯ' ಎಂದು ಕೇಳಿದಳು. ಅದಕ್ಕೆ ಜತೆಗಾರಳು 'ಸೈರಣೆ, ಕಾಣೆ! ಸೈರಣೆ ಅದು ನಿನ್ನಲ್ಲಿ ಇಲ್ಲ' ಎಂದು ಹೇಳಿದಳು.

---

## ೭. ಚೀಣೆಯ ದರ್ಜಿ

ಚೀಣರು ಚೆನ್ನಾದ ಕೆಲಸಗಾರರು. ಹೊಸದಾದ ಯಾವುದಾದರೂ ಒಂದು ಪದಾರ್ಥವನ್ನು ನೋಡಿದರೆ ಅದರಂತೆ ಮಾಡಬಲ್ಲರು.

ಚೀಣೆಗೆ ಹೋಗಿದ್ದ ಒಬ್ಬ ಹಿಂದೂದೇಶದವನು, ತನ್ನ ಅಂಗಿಗೆ ಆಗುವಷ್ಟು ಹೊಸ ಬನಾತನ್ನು ಒಬ್ಬ ಚೀಣೆಯ ದರ್ಜಿಯ ವಶಕ್ಕೆ ಕೊಟ್ಟು ತನಗೆ ಒಂದು ಅಂಗಿಯನ್ನು ಹೊಲಿದುಕೊಡೆಂದು ಹೇಳಿ, ಮಾದರಿಗೆ ತನ್ನ ಹಳೆದಾದ ಒಂದು ಚಿಂದಿ ಅಂಗಿಯನ್ನು ಕೊಟ್ಟು ಇದರಂತೆಯೇ ಮಾಡಿ ಕೊಡೆಂದನು

ಚೀಣೆಯ ದರ್ಜಿಯು ಆ ಹಳೆಯ ಅಂಗಿಯಂತೆ ಹೊಸ ಬನಾತಿನ ಅಂಗಿಯನ್ನೂ ಮಾಡುವುದಕ್ಕಾಗಿ ಬಹು ಕಷ್ಟಪಟ್ಟು, ಹಳೆಯ ಅಂಗಿಯಲ್ಲಿ ಹರಕು ಇದ್ದ ಕಡೆ ಹೊಸ ಬನಾತಿನ ಅಂಗಿಯಲ್ಲಿ ಹರಕನ್ನು ಮಾಸಿಯೂ ಸವೆದು ದಾರ ಬಿಟ್ಟಿದ್ದ ಕಡೆ ಹೊಸದನ್ನು ಸವೆಯಿಸಿ ದಾರ ಬಿಡಿಸಿಯೂ ತಂದು ಕೊಟ್ಟು, ಕೂಲಿಯನ್ನು ಮಾತ್ರವಲ್ಲದೆ ಬಹುಮಾನವನ್ನೂ ಕೇಳಿದನು.

ಆ ಹಿಂದುವು ಹೊಸ ಬನಾತಿನ ಚಿಂದಿಯಂಗಿಯನ್ನು ನೋಡಿ ಬಹು ಕೋಪ ಮಾಡಲು, ಚೀಣೆಯ ದರ್ಜಿಯು 'ಕೋಪವೇತಕ್ಕೆ? ಆ ಹಳೆಯ ಅಂಗಿಯಂತೆ ಮಾಡಿಕೊಡೆಂದು ನೀನು ಹೇಳಲಿಲ್ಲವೆ?' ಎಂದು ಕೂಲಿಯನ್ನೂ, ಮತ್ತೆ ಬಹುಮಾನವನ್ನೂ ಕೊಟ್ಟಲ್ಲದೆ ಬಿಡೆನೆಂದನು

---

## ೮. ಹೇಗೆ ಇದ್ದುದು ಹೇಗೆ ಆಯಿತು

ಹಿಂದಿನ ಕಾಲದಲ್ಲಿ ದೊರೆಗಳು ತಮ್ಮ ತಮ್ಮ ರಾಜ್ಯವನ್ನು ದೊಡ್ಡದು ಮಾಡುವುದಕ್ಕೆ ಬಹು ಸಾಹಸಮಾಡುತ್ತಿದ್ದರು ಮಗ್ಗುಲ ರಾಜ್ಯದ ದೊರೆ ಸ್ವಲ್ಪ ಕೈಯಲ್ಲಾಗದವನಾಗಿದ್ದರೆ ಒಡನೆಯೆ ಅವನ ಮೇಲೆ ದಂಡೆತ್ತಿ ಹೋಗಿ, ಅವನನ್ನು ಸೋಲಿಸಿ ಕಪ್ಪವನ್ನು ತೆಗೆದುಕೊಳ್ಳುತಿದ್ದರು. ಹೀಗಿರುವಾಗ ಒಂದಾನೊಂದು ಸಮಯದಲ್ಲಿ ಬಲಿಷ್ಠನೆಂದು ಹೊಗಳಿಸಿಕೊಳ್ಳುತ್ತಿದ್ದ ಒಬ್ಬ ದೊರೆಯು, ನೆರೆರಾಜ್ಯವನ್ನು ಕೈಯಲ್ಲಾಗದವನೊಬ್ಬನು ಆಳುತಿರುವನೆಂದು ಕೇಳಿ, ತನ್ನ ದಂಡನ್ನು ಕರೆದುಕೊಂಡು ಹೊರಟನು. ಯುದ್ಧದಲ್ಲಿ ಇವನಿಗೇ ಸೋಲಾಯಿತು; ಸೆರೆಸಿಕ್ಕಿಯೂ ಹೋದನು.

ತರುವಾಯ ಇವನು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಕಾಪಲಿದ್ದವರನ್ನು ' ಅನ್ನ, ನೀರು, ಕೊಡಿ ' ಎಂದು ಬೇಡಿದನು ಅವರಲ್ಲಿ ಒಬ್ಬನು, ಅನ್ನವನ್ನು ಮಾಡಿಹಾಕುವೆನೆಂದು ಹೇಳಿ ಅನ್ನವನ್ನು ಮಾಡಿ ಇಟ್ಟು ಕುಡಿವುದಕ್ಕೆ ನೀರು ತರಲು ಹೋದನು ಅವನು ಬರುವುದರೊಳಗಾಗಿ ಅಲ್ಲೇ ಕಾದಿದ್ದ ಒಂದು ನಾಯಿಯು, ಅನ್ನದ ತಪ್ಪಲೆಗೆ ತಲೆಹಾಕಿತು ಆದರ ತಲೆಯು ತಪ್ಪಲೆಯಲ್ಲಿ ಸಿಕ್ಕಿಕೊಂಡಿತು. ತಲೆಗೆ ಬಿಸಿ ತಗುಲಿತು ತಪ್ಪಲೆಯಿಂದ ತಲೆಯನ್ನು ತೆಗೆವುದಕ್ಕಾಗಿ ತಲೆಯನ್ನು ಒದರುತ್ತ ನಾಯಿ ಓಡಿತು ಇವೆಲ್ಲವನ್ನೂ ನೋಡುತಿದ್ದ ದೊರೆಯು ನಕ್ಕನು

ಕಾವಲಿದ್ದವರು, ಈ ದುಃಖದಲ್ಲಿಯೂ ಈ ದೊರೆಗೆ ನಗು ಹೇಗೆ ಬಂದಿತೆಂದು ಆಶ್ಚರ್ಯಪಟ್ಟರು ಅದಕ್ಕೆ ರಾಜನು, " ಈ ದಿನ ಬೆಳಗಿನಲ್ಲಿ ನನ್ನ ಬಿಡಾರದ ಸಾಮಾನುಗಳನ್ನು ಹೊತ್ತುಕೊಂಡು ಬರುವುದಕ್ಕೆ ' ಇಪ್ಪತ್ತೈದು ಆನೆಗಳಿವೆ, ಸಾಲದು, ಏನಪ್ಪಣೆ ? ಎಂದು ನನ್ನ ಮಂತ್ರಿಯು ಕೇಳಿದನು ಇನ್ನೂ ಹತ್ತು ಗಂಟೆ ಕೂಡ ಆಗಿಲ್ಲ ಇಷ್ಟರಲ್ಲಿಯೇ, ನನ್ನ ತಿಂಡಿಯ ಸಾಮಾನನ್ನೆಲ್ಲ ಒಂದು ಬಡಕಲ ನಾಯಿಯು ಎತ್ತಿಕೊಂಡು ಹೋಯಿತಲ್ಲಾ ! ಹೇಗೆ ಇದ್ದುದು ಹೇಗೆ ಆಯಿತು ! ಎಂದು ನಗು ಬಂದಿತು ' ಎಂದನು

---

## ೯ ಕತ್ತೆಯ ಸ್ಮರಣೆ

ರಾಮಪ್ರಸಾದನೆಂಬವನಲ್ಲಿ ಒಂದು ಸೊಗಸಾದ ಕುದುರೆ ಇದ್ದಿತು ಒಂದು ದಿನ ಆ ಕುದುರೆಯು ಲಾಯದಿಂದ ಕಿತ್ತುಕೊಂಡು ಭರ‍್ರನೆ ಓಡತೊಡಗಿತು ಆಗ ಅದರ ದಾರಿಯಲ್ಲಿ, ಒಂದು ಕತ್ತೆಯು ಬೆನ್ನು ಮುರಿದು ಹೋಗುವಷ್ಟು ಭಾರವಾದ ಬಟ್ಟೆಯ ಮೂಟೆಯನ್ನು ಹೊತ್ತುಕೊಂಡು ಮೆಲ್ಲನೆ ಹೆಜ್ಜೆಯ ಮೇಲೆ ಹಜ್ಜೆಯನ್ನು ಇಡುತ್ತ ಹೋಗುತ್ತಿದ್ದಿತು. ಕುದುರೆಯು ದೂರದಲ್ಲಿಯೇ ಕೆನೆಯುತ ' ಲೆ ! ಕತ್ತೆ ! ಓರೆಯಾಗು ಎಲ್ಲಾದರೂ ನನ್ನ ಕಾಲಿಗೆ ಸಿಕ್ಕಿ ಪ್ರಾಣವನ್ನು ಬಿಟ್ಟೀಯೆ ' ಎಂದು ಗದರಿಸಿತು ಪಾಪ ! ಕತ್ತೆಯು ಇದ್ದುದರಲ್ಲಿ ಸ್ವಲ್ಪ ಜಾಗ್ರತೆ ಮಾಡಿಕೊಂಡು ಓರೆಯಾಯಿತು

ಇದಾಗಿ ಕೆಲವು ವರ್ಷಗಳು ಕಳೆದುಹೋದುವು ಆ ವೇಳೆಗೆ ಆ ಕುದುರೆಯು ಮುದಿಯಾಯಿತು ರಾಮಪ್ರಸಾದನು ಅದನ್ನು ಮಾರಿಬಿಟ್ಟನು, ಒಬ್ಬ ಈಡಿಗರವನು ಅದನ್ನು ಕೊಂಡುಕೊಂಡು ಹೆಂಡ ಹೊರವುದಕ್ಕೆ ಇಟ್ಟುಕೊಂಡನು. ಒಂದು ದಿನ ಈ ಮುದಿ ಕುದುರೆಯು ಹೆಂಡದ ಚೀಲವನ್ನು ಹೊರಲಾರದೆ ಹೊತ್ತುಕೊಂಡು, ಬಾಯಿಯಲ್ಲಿ ನೀರುಗರೆಯುತ್ತ, ಕಾಲನ್ನು ಕೊಕ್ಕರಿಸಿ ಹಾಕುತ್ತ, ಮುಕ್ಕರಿಯುತ್ತ ಬರುತ್ತಿದ್ದಿತು

ಕತ್ತೆಯೂ ಮುದಿಯಾಗಿದ್ದುದರಿಂದ, ಅದನ್ನು ಅಗಸನು ಹತ್ತಿರದಲ್ಲಿದ್ದ ಒಂದು ಮೈದಾನದಲ್ಲಿ ಮೇಯುವುದಕ್ಕೆ ಬಿಟ್ಟಿದ್ದನು ಅದು ಕುದುರೆ ಹೋಗು

ತಿದ್ದುದನ್ನು ನೋಡಿತು. ಆಗ ಕತ್ತೆಗೆ ಹಿಂದೆ ಕುದುರೆಯಾಡಿದ ಗರ್ವದ ಮಾತು ಜ್ಞಾಪಕಕ್ಕೆ ಬಂದಿತು ಕೂಡಲೆ ಅದು ಕುದುರೆಯನ್ನು ಕುರಿತು,—ಏನು ಕುದುರೆ ಗಳವರೇ, ಅಯ್ಯೋ ಪಾಪ! ತಮಗೂ ಈ ಗತಿ ಬಂದಿತೆ!—ಎಂದಿತು.

---

## ೧೦. ಕಾಕಾಸುರನ ಕಥೆ

ಶ್ರೀರಾಮನು ಸೀತಾಲಕ್ಷ್ಮಣರೊಡನೆ ಚಿತ್ರಕೂಟ ಪರ್ವತದಲ್ಲಿ ವಾಸ ವಾಗಿದ್ದನು ಅಲ್ಲಿ ಒಂದು ದಿನ ಶ್ರೀರಾಮನು ಸೀತೆಯ ತೊಡೆಯಮೇಲೆ ತಲೆಯ ನ್ನಿಟ್ಟುಕೊಂಡು ನಿದ್ದೆಮಾಡುತಿದ್ದನು. ಆ ಸಮಯವನ್ನು ನೋಡಿ ಕಾಕಾಸುರ ನೆಂಬ ರಾಕ್ಷಸನೊಬ್ಬನು ಸೀತೆಯ ಹತ್ತಿರಹತ್ತಿರಕ್ಕೆ ಬಂದು ಅಲ್ಲೇ ಕುಳಿತು, ತನ್ನ ಕೊಕ್ಕಿನಿಂದ ಅವಳ ಮೈಯನ್ನು ಕುಕ್ಕಿದನು ತಾನು ಅಲ್ಲಾಡಿದರೆ ಶ್ರೀರಾಮನಿಗೆ ಎಚ್ಚರವಾಗುವುದೆಂದು ಚಿಂತಿಸಿ ಸೀತಾದೇವಿಯು ಆ ಕಾಗೆಯ ಹಿಂಸೆಯನ್ನು ಸಹಿಸಿ ಕೊಂಡು ಸ್ವಲ್ಪವೂ ಅಲುಗಾಡದಂತೆ ಇದ್ದಳು

ಕಾಗೆಯು ಕುಕ್ಕುತ್ತಲೇ ಇದ್ದಿತು ಗಾಯದಿಂದ ರಕ್ತವು ಹರಿಯುವುದಕ್ಕೆ ಮೊದಲಾಯಿತು ಇದರಿಂದ ಶ್ರೀರಾಮನ ಮೈಯು ತಣ್ಣಗಾಯಿತು. ಶ್ರೀರಾಮನು ಒಡನೆ ಎಚ್ಚರಗೊಂಡನು ಕಾಕಾಸುರನು ಹಾರಿಹೋದನು ಆಗ ಸೀತೆಯು ಕಾಕಾಸುರನ ಹಿಂಸೆಯನ್ನು ತಿಳಿಸಿದಳು.

ಶ್ರೀರಾಮನಿಗೆ ಬಹುಕೋಪ ಬಂದಿತು. ಕಾಕಾಸುರನು ಹಾರಿ ಹೋಗು ವುದನ್ನು ನೋಡಿ ಆಗ ಹತ್ತಿರವಿದ್ದ ಒಂದು ದರ್ಭೆಯನ್ನು ಮಂತ್ರಿಸಿ ಅವನ ಮೇಲೆ ಬಿಟ್ಟನು ಅದು ಕಾಕಾಸುರನು ಯಲ್ಲೆಲ್ಲಿ ಹೋದರೂ ಬಿಡದೆ ಬೆನ್ನಟ್ಟಿತು. ಯಾರನ್ನು ಮರೆಹೊಕ್ಕರೂ ಬಿಡಲಿಲ್ಲ ಅದರಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಕಾಕಾ ಸುರನು ಶ್ರೀರಾಮನಲ್ಲಿಯೇ ಪುನಃ ಬರಬೇಕಾಯಿತು ಹಾಗೆಯೇ ಅವನು ಬಂದು ಶ್ರೀರಾಮನ ಪಾದಗಳ ಮೇಲೆ ಬಿದ್ದು ಹೊರಳಿದನು ಕರುಣಾಳುವಾದ ಶ್ರೀರಾ ಮನು ಅವನನ್ನು ಕ್ಷಮಿಸಿದನು.

---

## ೧೧. ಇರುವೆಯ ಬುದ್ಧಿವಂತಿಕೆ

ಹೊಗೆಬಂಡಿಯು ಕಬ್ಬಿಣದ ಕಂಬಿಯಮೇಲೆ ತಿರುಗಾಡುವುದೂ ಆ ಕಬ್ಬಿ ಣದ ಕಂಬಿಯ ಕೆಳಗೆ ಮರದ ತುಂಡುಗಳನ್ನು ಹಾಸಿರುವುದೂ ನಿಮಗೆ ತಿಳಿದೇ ಇದೆ ಯಷ್ಟೆ. ಹಾಗೆ ಹಾಸಿದ್ದ ಒಂದು ಮರದ ತುಂಡಿನ ಕೆಳಗೆ ಇರುವೆಗಳು ಗೂಡು ಕಟ್ಟಿಕೊಂಡಿದ್ದುವು ಕೆಲವು ವೇಳೆ ಹೊಗೆಬಂಡಿಯು ಬರುವ ಹೊತ್ತಿಗೆ ಸರಿಯಾಗಿ ಇರುವೆಗಳು ತಮ್ಮ ಗೂಡಿಗೆ ಹೋಗುವುದಕ್ಕೆ ಬಂದು ಬಂಡಿಯ ಚಕ್ರಕ್ಕೆ ಸಿಕ್ಕಿ ಸಾವಿರಗಟ್ಟಳೆಯಾಗಿ ಸಾಯುತ್ತಿದ್ದುವು ಹೀಗಾಗಿ ಕೊನೆಗೆ ಕಬ್ಬಿಣದ ಕಂಬಿಯ

ಮೇಲೆ ಹೋದರೆ ಅಪಾಯವು ಬರುವುದೆಂದು ಅನುಭವದಿಂದ ಗೊತ್ತುಮಾಡಿಕೊಂಡು, ಇರುವೆಗಳು ತಮ್ಮ ಗೂಡಿಗೆ ಹೋಗುವುದಕ್ಕೆ ಅನುಕೂಲವಾಗುವಂತೆ ಕಂಬಿಯ ಕೆಳಗೆ ದಾರಿಯನ್ನು ಮಾಡಿಕೊಂಡುವು

ಮೊದಲು ಕಂಬಿಯಮೇಲೆ ತಿರುಗಾಡುತ್ತಿದ್ದುದರಿಂದ ಇರುವೆಗಳು ಸಾಯುತಿದ್ದುದನ್ನೂ ಈಚೆಗೆ ಅವು ಕಂಬಿಯ ಕೆಳಗೆ ತಿರುಗಾಡುತಿದ್ದುದನ್ನೂ ನೋಡಿದ್ದ ಒಬ್ಬನು, ಇರುವೆಗಳ ಬುದ್ಧಿವಂತಿಕೆಯನ್ನು ಪರೀಕ್ಷಿಸಲು ಒಂದು ದಿನ ಆ ಇರುವೆಗಳ ಗೂಡಿನ ಬಳಿಗೆ ಬಂದು ನಿಂತು, ದೂರದಲ್ಲಿ ಇರುವೆಗಳು ತಮ್ಮತಮ್ಮ ಬಾಯಿಯಲ್ಲಿ ಅಕ್ಕಿಯ ನುಚ್ಚಿನಂತಿರುವ ತಮ್ಮ ಮೊಟ್ಟೆಗಳನ್ನು ಕಚ್ಚಿಕೊಂಡು ಬರುತಿದ್ದುದನ್ನು ನೋಡಿ, ಅವು ಗೂಡಿಗೆ ಹೋಗುವುದಕ್ಕೆ ಮಾಡಿಕೊಂಡಿದ್ದ ದಾರಿಯನ್ನು ಮುಚ್ಚಿದನು ಇರುವೆಗಳು ಬಂದುವು. ದಾರಿಯು ಮುಚ್ಚಿಹೋಗಿದ್ದಿತು ಆದರೂ ಅವು ಕಬ್ಬಿಣದ ಕಂಬಿಯಮೇಲೆ ಹೋಗದೆ ತಮ್ಮ ಬಾಯಿಯಲ್ಲಿದ್ದುದನ್ನು ಅಲ್ಲೆ ಬಿಟ್ಟು, ಎಲ್ಲವೂ ಕಂಬಿಯ ಕೆಳಗೆ ಮತ್ತೊಂದು ದಾರಿಯನ್ನು ಹೊಸದಾಗಿ ಮಾಡುವುದಕ್ಕೆ ಹೊರಟುವು ದಾರಿಯಾಯಿತು ಇರುವೆಗಳು ಸುಖವಾಗಿ ಗೂಡನ್ನು ಸೇರಿದುವು

---

## ೧೨ ಗುರು ಶಿಷ್ಯರು

ಕಾಶೀಪಟ್ಟಣವೆಂಬುದು ಒಂದು ದೊಡ್ಡ ಪಟ್ಟಣ ಆ ಪಟ್ಟಣದಲ್ಲಿ ಒಂದು ಪಾಠಶಾಲೆ ಅಲ್ಲಿ ಓದುವುದಕ್ಕಾಗಿ ಹುಡುಗರು ದೂರ ದೇಶಗಳಿಂದ ಬರುತ್ತಿದ್ದರು ಕೆಲವು ಮಂದಿ ಬಾಲಕರು ಗುರುಗಳ ಮನೆಗಳಲ್ಲಿಯೇ ಇದ್ದುಕೊಂಡು ಅವರ ಮನಸ್ಸೊಪ್ಪುವಂತೆ ವಿದ್ಯೆಯನ್ನು ಕಲಿಯುತ್ತಿದ್ದರು

ಅವರಲ್ಲಿ ಬಲು ಚಟುವಟಿಕೆಯುಳ್ಳವನಾಗಿಯೂ ಸ್ವಲ್ಪ ತುಂಟನಾಗಿಯೂ ಇದ್ದ ಒಬ್ಬ ಬಾಲಕನನ್ನು ಒಳ್ಳೆಯ ಮಾರ್ಗಕ್ಕೆ ತರಬೇಕೆಂದು ' ಗುರುಗಳು ತಮ್ಮ ಜತೆಯಲ್ಲಿಯೇ ಇಟ್ಟುಕೊಂಡು ಅವನಿಗೆ ವಿವೇಕವನ್ನು ಹೇಳುತ್ತಿದ್ದರು ಒಂದು ದಿನ ಸಾಯಂಕಾಲ ಆ ಹುಡುಗನೊಡನೆ ಗುರುಗಳು ಗಂಗಾತೀರದಲ್ಲಿ ಹೋಗುತ್ತಿರಲು ದಾರಿಯಲ್ಲಿ ಒಂದು ಮರದ ಕೆಳಗೆ ಒಂದು ಜತೆ ಎಕ್ಕಡವೂ, ಮೇಲುಗಡೆ ಕೊಂಬೆಯ ಮೇಲೆ ಒಂದು ಕಂಬಳಿಯೂ ಇದ್ದುದನ್ನು ಬಾಲಕನು ನೋಡಿ, ಗುರುಗಳ ಕಡೆಗೆ ತಿರುಗಿ, ' ಈ ಎಕ್ಕಡವು ಯಾವನೋ ಒಬ್ಬ ರೈತನದಾಗಿರಬಹುದು ಅವನು ಇದನ್ನು ಇಲ್ಲಿ ಬಿಟ್ಟು ಗದ್ದೆಯಮೇಲೆ ಎಲ್ಲೋ ಹೋಗಿರಬಹುದು ನಾವು ಇದನ್ನು ಈ ಬೇಲಿಯ ಹಿಂದೆ ಎಲ್ಲಾದರೂ ಮುಚ್ಚಿಟ್ಟು ವಿನೋದ ಮಾಡೋಣ' ಎಂದನು

ಅದಕ್ಕೆ ಗುರುಗಳು ' ಬಡವರಿಗೆ ಹಿಂಸೆ ಮಾಡಿ ನಾವು ಸಂತೋಷಪಡಬಾರದು. ನನ್ನಲ್ಲಿ ಎರಡು ರೂಪಾಯಿಗಳಿವೆ. ಅವನ್ನು ಆ ಎಕ್ಕಡದಲ್ಲಿಟ್ಟು, ನಾವು

ಇಲ್ಲೆ ಎಲ್ಲಾದರೂ ಅವಿತುಕೊಂಡಿದ್ದು, ಈ ರೂಪಾಯಿಗಳನ್ನು ನೋಡಿ, ರೈತನ ಮುಖವು ಹೇಗಾಗುವುದೋ ನೋಡೋಣ, ಎಂದರು ಇದೇ ಪ್ರಕಾರ ಒಂದೊಂದು ಎಕ್ಕಡದಲ್ಲಿ ಒಂದೊಂದು ರೂಪಾಯನ್ನಿಟ್ಟು ಗುರು ಶಿಷ್ಯರಿಬ್ಬರೂ ಹತ್ತಿರವಿದ್ದ ಬೇಲಿಯ ಹಿಂದುಗಡೆ ಮರೆಯಾಗಿ ನಿಂತರು

ಸ್ವಲ್ಪಹೊತ್ತಿನಲ್ಲಿಯೇ ರೈತನು ಬಂದು ಕಂಬಳಿಯನ್ನು ಒದರಿ ಹೊದ್ದು ಕೊಂಡು, ಎಕ್ಕಡಕ್ಕೆ ಕಾಲನ್ನು ಹಾಕಿದನು. ಕಾಲಿಗೆ ಏನೋ ಒತ್ತಿದಂತೆ ಆಗಲು, ಕೈಯಿಂದ ಅದನ್ನು ತೆಗೆದು ಮಬ್ಬುಗತ್ತಲೆಯಲ್ಲಿ ಚೆನ್ನಾಗಿ ನೋಡಿ ಸಂತೋಷಪಟ್ಟು, ಇನೊಂದು ಮೆಟ್ಟಿಗೆ ಕಾಲನ್ನು ಹಾಕಿದನು ಅದರಲ್ಲೂ ಒಂದು ರೂಪಾಯಿ ಸಿಕ್ಕಲು ಅವನ ಸಂತೋಷವು ಉಕ್ಕಿತು. ನಿಂತ ಕಡೆಯಲ್ಲಿಯೇ ಆ ರೈತನು ದೇವ ರಿಗೆ ನಮಸ್ಕಾರ ಮಾಡಿ ಕೈಮುಗಿದುಕೊಂಡು, ' ಅನ್ನವಿಲ್ಲದೆ ಸಂಕಟಪಡುತ್ತಿರುವ ನನ್ನ ಹೆಂಡತಿ ಮಕ್ಕಳ ಕಷ್ಟವನ್ನು ತಿಳಿದು ನನಗೆ ಈ ಭಾಗ್ಯವನ್ನು ಕೊಟ್ಟು ಈ ದಿನ ಕಾಪಾಡಿದೆ ಸ್ವಾಮಿ, ಈ ಧರ್ಮವನ್ನು ಮಾಡಿದ ಆ ಮಹಾರಾಯನನ್ನು ಚೆನ್ನಾಗಿ ಕಾಪಾಡು, ಸ್ವಾಮಿ, ಎಂದು, ದೇವರನ್ನು ಪ್ರಾರ್ಥಿಸಿ ಸಂತೋಷದಿಂದ ಮನೆಯ ಕಡೆಗೆ ತಿರುಗಿದನು

ಇದೆಲ್ಲವನ್ನೂ ನೋಡುತ್ತಿದ್ದ ಶಿಷ್ಯನು ಅಲ್ಲಿಯೇ ಗುರುಗಳಿಗೆ ನಮಸ್ಕಾರ ಮಾಡಿ, ' ಈ ದಿನ ನನಗೆ ತಾವು ಕಲಿಸಿದ ವಿವೇಕವನ್ನು ನಾನು ಎಂದಿಗೂ ಮರೆಯ ಲಾರೆನು ಅವನಿಗೆ ನಾನು ಹಿಂಸೆ ಮಾಡಿದ್ದರೆ ಇಂತಹ ಸಂತೋಷವು ನನಗೆ ಉಂಟಾಗುತ್ತಿರಲಿಲ್ಲ ' ಎಂದು ಹೇಳಿ ಆ ದಿನ ಮೊದಲ್ಗೊಂಡು ಆ ಬಾಲಕನು ಯಾವ ಪ್ರಾಣಿಗೇ ಆಗಲಿ ಹಿಂಸೆ ಮಾಡುವುದನ್ನು ಬಿಟ್ಟುಬಿಟ್ಟನು

---

## ೧೩ ಇಬ್ಬರು ಚಿತ್ರಗಾರರು

ಒಂದು ಪಟ್ಟಣದಲ್ಲಿ ಬಹು ಬುದ್ಧಿವಂತರಾದ ಇಬ್ಬರು ಚಿತ್ರಗಾರರು ಇದ್ದರು ಅವರಿಬ್ಬರೂ ತಮ್ಮಲ್ಲಿ ಯಾರು ಚೆನ್ನಾಗಿ ಬರೆಯಬಲ್ಲರೆಂಬುದನ್ನು ಗೊತ್ತು ಮಾಡುವುದಕ್ಕಾಗಿ ಒಬ್ಬೊಬ್ಬರು ಒಂದೊಂದು ಪಟವನ್ನು ಬರೆದರು.

ಒಬ್ಬನು ದ್ರಾಕ್ಷಿಹಣ್ಣಿನ ಗೊಂಚಲುಗಳಿಂದ ಕೂಡಿದ ಬಳ್ಳಿಯನ್ನು ಬರೆದು ತಂದಿಟ್ಟನು ನಿಜವಾದ ದ್ರಾಕ್ಷಿಹಣ್ಣಿನ ಗೊಂಚಲುಗಳೆಂದು ಪಕ್ಷಿಗಳು ಬಂದು ಆ ಪಟಕ್ಕೆ ಮುತ್ತಿಕೊಂಡುವು

ಇನ್ನೊಬ್ಬನು ತೆಳ್ಳನೆಯ ಬಿಳಿಯ ಬಟ್ಟೆಯ ತೆರೆಯಂತೆ ಬರೆದು ತಂದಿಟ್ಟನು. ದ್ರಾಕ್ಷಿಯ ಚಿತ್ರವನ್ನು ಬರೆದವನು ಈ ಪಟದ ಬಳಿಗೆ ಬಂದು ಚೆನ್ನಾಗಿ ನೋಡಿ, ' ಬಟ್ಟೆಯ ತೆರೆಯನ್ನು ತೆಗೆ, ನೀನು ಬರೆದಿರುವ ಚಿತ್ರವನ್ನು ನೋಡೋಣ ' ಎಂದನು.

ಆಮೇಲೆ ಬಟ್ಟೆಯ ತೆರೆಯ ಚಿತ್ರವನ್ನೇ ಬರೆದಿರುವುದನ್ನು ತಿಳಿದು, ನಾಚಿಕೊಂಡು ತನಗಿಂತಲೂ ಅವನು ಶಕ್ತನೆಂದು ಒಪ್ಪಿ, " ಅಯ್ಯಾ ! ನನ್ನ ಪಟಕ್ಕೆ ಪಕ್ಷಿಗಳು ಮೋಸಹೋದುವು ನಿನ್ನ ಪಟವನ್ನು ನೋಡಿ ಚಿತ್ರಗಾರನಾದ ನಾನೇ ಮೋಸಹೋದೆನು ನೀನೇ ಶಕ್ತನು " ಎಂದನು

---

## ೧೪ ಗೋವಿನ ಕಥೆ

ಕರ್ಣಾಟ ದೇಶದಲ್ಲಿ ಒಂದಾನೊಂದು ಪಟ್ಟಣ ಆ ಪಟ್ಟಣದ ಸುತ್ತಮುತ್ತೂ ಬೆಟ್ಟ ಗುಡ್ಡಗಳೂ ಗಿಡಗಳೂ ಬೇಕಾದಹಾಗೆ ಇದ್ದುವು ಹತ್ತಿರದಲ್ಲಿಯೇ ಒಂದು ಸಣ್ಣ ಹೊಳೆ ಇದ್ದಿತು ಅಲ್ಲಿ ಬಹುಮಂದಿ ಗೊಲ್ಲರು ವಾಸವಾಗಿದ್ದರು ಒಬ್ಬೊಬ್ಬ ಗೊಲ್ಲನ ಹತ್ತಿರ ನೂರಾರು ಹಸುಗಳು ಇದ್ದುವು ಆ ಹಸುಗಳೆಲ್ಲ ಹತ್ತಿರವಿದ್ದ ಗಿಡಕ್ಕೆ ಹೋಗಿ ಮೇದು ಹೊಳೆಯಲ್ಲಿ ನೀರು ಕುಡಿದುಕೊಂಡು ಬರುತ್ತಿದ್ದುವು

ಅವರಲ್ಲಿ ಕಾಳಿಂಗ ಕಾಳಿಂಗ, ಎಂಬ ಒಬ್ಬ ಗೊಲ್ಲನ ಹತ್ತಿರ ಬಲು ಚೆನ್ನಾದ ಹಸುಗಳು ಇದ್ದುವು ಅವನು ಅವುಗಳಲ್ಲಿ ಒಂದೊಂದಕ್ಕೆ ಒಂದೊಂದು ಹಸರನ್ನು ಕೊಟ್ಟಿದ್ದನು ಒಂದಕ್ಕೆ ' ಕಾವೇರಿ ' ಎಂದು ಹಸರಿಟ್ಟಿದ್ದನು ಒಂದನ್ನು ' ಕಪಿಲೆ ' ಎಂದು ಕೂಗುತ್ತಿದ್ದನು. ' ನರ್ಮದೆ ' ಎಂದು ಒಂದು ಹಸುವಿಗೆ ಹೆಸರು. ಪುಣ್ಯ ಕೋಟಿ ಎಂದರೆ, ಇನ್ನೊಂದು ಹಸು ಸಡಗರದಿಂದ ಬರುತ್ತಿದ್ದಿತು ಅವನು ಆ ಹಸುಗಳನ್ನೆಲ್ಲ ಬಹು ಚೆನ್ನಾಗಿ ಸಾಕುತ್ತಿದ್ದನು

ಹೀಗಿರುತ್ತಿರಲು ಒಂದು ದಿನ ಬೆಳಗಿನಲ್ಲಿ ಕಾಳಿಂಗನು ಎಂದಿನಂತೆ ಹಾಲನ್ನು ಕರೆದುಕೊಂಡು, ಹಸುಗಳನ್ನು ಮೇಯುವುದಕ್ಕೆ ಬೆಟ್ಟಕ್ಕೆ ಅಟ್ಟಿಕೊಂಡುಹೋಗಿ, ತಾನು ಒಂದು ಮರದ ನೆಳಲಿನಲ್ಲಿ ಕೊಳಲನ್ನು ಊದುತ್ತ ಕಾಲವನ್ನು ಹಾಯಾಗಿ ಕಳೆಯುತ್ತಿದ್ದು ಪುಣ್ಯಕೋಟಿ, ಕಾವೇರಿ, ಕಪಿಲಾ, ನರ್ಮದಾ, ಎಲ್ಲರೂ ಬನ್ನಿ, ಹೊತ್ತಾಯಿತು ಕರುಗಳೆಲ್ಲ ಕಾದಿವೆ, ಎಂದು ಕೂಗಿದನು ಇವನ ಕೂಗನ್ನು ಕೇಳಿ ಹೊಟ್ಟೆತುಂಬ ಮೇದು ಅಲ್ಲಲ್ಲಿಯೇ ಮೆಲುಕು ಹಾಕುತ್ತ ಮಲಗಿದ್ದ ಹಸುಗಳೆಲ್ಲ ಸಂತೋಷದಿಂದ ಸಡಗರಿಸಿಕೊಂಡು ಹೊರಟುವು ಗೊಲ್ಲನೂ ಹೊರಟನು

ಮೂರು ನಾಲ್ಕು ದಿನಗಳಿಂದಲೂ ತಿನ್ನಲಿಕ್ಕೆ ಇಲ್ಲದೆ ಹಸಿವಿನಿಂದ ಸಂಕಟಪಡುತ್ತಿದ್ದ ಹುಲಿಯೊಂದು, ಆ ಹಸುಗಳು ಬರುವ ದಾರಿಯಲ್ಲಿಯೇ ಹೊಂಚುಹಾಕುತ್ತ ಕಾದಿದ್ದಿತು. ಪುಣ್ಯಕೋಟಿಯು ತನ್ನ ಕಂದನನ್ನು ನೋಡಬೇಕೆಂಬ ಆತುರದಿಂದ ಮುಂದೆ ಮುಂದೆ ಬರುತ್ತಿರುವುದನ್ನು ಕಂಡು ಹುಲಿಯು ಆರ್ಭಟಿಸಿ ಮೇಲೆ ಬಿದ್ದಿತು. ಅದರ ಆರ್ಭಟಕ್ಕೆ ಇತರ ಪಶುಗಳೆಲ್ಲ ಚಲ್ಲಾಪಿಲ್ಲಿಯಾಗಿ ಚದರಿ ಹೋದವು ಪುಣ್ಯ

ಕೋಟಿಯು ಸಿಕ್ಕಿಹೋಯಿತು. ಅಯ್ಯೋ! ಅದರ ಸಂಕಟವೆಷ್ಟಿರಬಹುದು. ! ತನ್ನ ಕಂದನಿಗೆ ಹಾಲು ಕೊಟ್ಟು ಸಂತೈಸಲು ಕಾಲವಿಲ್ಲವಲ್ಲ! ಅಯ್ಯೋ! ಎಂದು ಕಣ್ಣಿನಲ್ಲಿ ನೀರುಸುರಿಸುತ್ತ ಗಡಗಡನೆ ನಡುಗುತ್ತ ತನ್ನನ್ನು ಸೀಳಿ ರಕ್ತವನ್ನು ಹೀರಿ ಮಾಂಸವನ್ನು ತಿನ್ನುವೆನೆಂದು ಬಂದ ಹುಲಿಯನ್ನು ನೋಡಿ, ' ಅಯ್ಯಾ! ಹುಲಿರಾಯನೇ! ನಾನು ಬಂಧುಗಳಿಗೆ ಬಿಟ್ಟುಕೊಂಡು ಬರುವೆನು. ನನ್ನ ಕರುವಿಗೆ ಹಾಲನ್ನು ಕೊಟ್ಟು ನಿಜವಾಗಿ ಬೇಗ ಬಂದುಬಿಡುವೆನು, ' ಎಂದಿತು ಅದಕ್ಕೆ ಹುಲಿಯು-ಚೆನ್ನಾಯಿತು! ಹಸಿದು ಕಾದಿರುವೆನು ನಾನು, ನನ್ನ ಕೈಗೆ ಸಿಕ್ಕಿರುವ ನಿನ್ನನ್ನು ಈಗ ಬಿಟ್ಟು ಬಿಟ್ಟರೆ ಮತ್ತೆ ನೀನು ಬರುವೆಯಾ? ಇದು ಎಲ್ಲಿಯ ಮಾತು! ಅದು ಆಗಲಾರದು!—ಎಂದಿತು ಪುಣ್ಯಕೋಟಿಯು-ಅಯ್ಯಾ, ನಾನು ಸುಳ್ಳಾಡುವೆನೆಂದು ತಿಳಿಯಬೇಡ

ಸತ್ಯವೆಂಬುದೆ ತಾಯಿ ತಂದೆ | ಸತ್ಯವೆಂಬುದೆ ಬಂಧು ಬಳಗ ||
ಸತ್ಯವಾಕ್ಯಕೆ ತಪ್ಪಿ ನಡೆದರೆ | ಮೆಚ್ಚನಾ ಜಗದೀಶನು ||

ಆದುದರಿಂದ ನಾನು ಕೊಟ್ಟಮಾತಿಗೆ ತಪ್ಪುವುದಿಲ್ಲ—ಎಂದು ಆಣೆ ಇಡಲು ಹಸಿದಿದ್ದರೂ ಆ ಹುಲಿಯು ಇದರ ಸಂಕಟವನ್ನು ನೋಡಲಾರದೆ ಕಳುಹಿಸಿಕೊಟ್ಟಿತು.

ಆಗ ಪುಣ್ಯಕೋಟಿಯು ಏನು ಮಾಡಿರಬಹುದು ಹೇಳಿ? ಪುಣ್ಯಕೋಟಿಯಲ್ಲವೇ ಆ ಹಸುವಿನ ಹಸರು. ಹೌದು, ಅದು ನೆಟ್ಟಗೆ ಕರುವಿದ್ದೆಡೆಗೆ ಹೋಗಿ,—ಕಂದಾ! ಬಾ, ಹಾಲು ಕುಡಿ, ನನ್ನನ್ನು ತಿನ್ನುವೆನೆಂದು ಕಾದುಕೊಂಡಿರುವ ಹುಲಿಯ ಹತ್ತಿರಕ್ಕೆ ಹೋಗಬೇಕು!—ಎಂದು ಕರುವಿನ ಮೈಯನ್ನು ನೆಕ್ಕುತ್ತ ಕಣ್ಣೀರನ್ನು ಸುರಿಸಿತು

ಆಗ ಕರು—' ಅಮ್ಮಾ ನೀನೇಕೆ ಹೋಗಬೇಕು? ಇಲ್ಲಿಯೇ ಇದ್ದುಬಿಡು ಆ ಹುಲಿ ಇಲ್ಲಿಗೆ ಬರುತ್ತದೆಯೆ? ' ಎಂದಿತು 'ಕಂದಾ, ಕೊಟ್ಟ ಮಾತಿಗೆ ತಪ್ಪಬಾರದು. ಆಡಿದ ಮಾತನ್ನು ಮೀರಬಾರದು ಕಷ್ಟವೇ ಆಗಲಿ, ಸುಖವೇ ಆಗಲಿ, ಹೇಳಿದ ಹಾಗೆ ಮಾಡಿಬಿಡಬೇಕು! ಇದರಿಂದ ದೇವರು ನಮಗೆ ಒಳ್ಳೆಯದು ಮಾಡುತ್ತಾನೆ,' ಎಂದು ಹೇಳಿ ಹೊರಡುವುದಕ್ಕೆ ಸಿದ್ಧವಾಯಿತು ಆಗ ಕರುವು—ಅಮ್ಮಾ! ಎಂದು ಅರಹುತ್ತ

ಆರ ಹಾಲ ಕುಡಿಯಲಮ್ಮ | ಆರ ಸೇರಿ ಬದುಕಲಮ್ಮ ||
ಆರ ಬಳಿಯಲಿ ಮಲಗಲಮ್ಮ | ಆರು ನನಗೆ ಹಿತವರು ||

ಎಂದು ಗೋಳಿಟ್ಟಿತು ಪುಣ್ಯಕೋಟಿಯು ಕಾವೇರಿ, ಕಪಿಲೆ, ನರ್ಮದೆ ಮುಂತಾದವರನ್ನು ನೋಡಿ ' ಎಲೆ ಅಮ್ಮಾ, ಎಲೆ ಅಕ್ಕಾ, ತಾಯಿಯನ್ನು ಕಳೆದುಕೊಳ್ಳುವ ಈ ಕರುವನ್ನು ನೀವುಗಳೆಲ್ಲರೂ ನಿಮ್ಮ ಕರುವಿನಂತೆ ಸಾಕಿಕೊಳ್ಳಿರಿ. ' ಮುಂದೆ ಬಂದರೆ ಹಾಯಬೇಡಿ! ಹಿಂದೆ ಬಂದರೆ ಒದೆಯಬೇಡಿ! ಕಂದ ನಿಮ್ಮವನೆಂದು ಕಾಣಿರಿ, ' ಎಂದು ಹೇಳಿ ತನ್ನ ಕರುವನ್ನು ಕುರಿತು ಎಲೈ ಕಂದಾ! ನೀನು ಕೊನೆಯಲ್ಲಿ ಮೇಯಬೇಡ, ಬೆಟ್ಟದೊತ್ತಿಗೆ ಹೋಗಬೇಡ, ಗುಂಪಿನಲ್ಲಿರು ಮಗು—ಎಂದು ಕಣ್ಣೀರು ಸುರಿಸಿ, ಮೈಯನ್ನು ಮತ್ತೊಂದಾವೃತ್ತಿ ನೆಕ್ಕಿ, ಪುಣ್ಯಕೋಟಿಯು ಹುಲಿಯ ಗವಿಗೆ ಹೊರಟಿತು

ಅಲ್ಲಿಂದ ಹೊರಟು, ಹುಲಿಯಿದ್ದ ಗವಿಯ ಬಾಗಿಲಿಗೆ ಹೋಗಿ, 'ಇಗೋ ಹುಲಿರಾಯ! ನನ್ನ ಮಾತಿಗೆ ತಪ್ಪದೆ ನಾನು ಬಂದಿರುವೆನು, ಇಗೋ ನನ್ನನ್ನು ತಿಂದು ನಿನ್ನ ಹಸಿವನ್ನು ಅಡಗಿಸಿಕೋ, ನಿನಗೆ ಬಹು ಹಸಿವಾಗಿರಬಹುದು ಎಂದು ಪುಣ್ಯಕೋಟಿಯು ಕೂಗಿ ಹೇಳಿತು ಆ ಮಾತನ್ನು ಕೇಳಿ, ಹುಲಿಯು ಅದರ ಸತ್ಯಕ್ಕೆ ಮೆಚ್ಚಿ ಸಂತೋಷಗೊಂಡು ಕಣ್ಣಿನಲ್ಲಿ ನೀರು ಸುರಿಸುತ್ತ,-ನಿನ್ನಂತಹ ಸತ್ಯವಂತೆ ಯನ್ನು ತಿಂದರೆ ದೇವರು ಮೆಚ್ಚಾನೆ ? ನಿನ್ನ ಕಂದನನ್ನು ಸೇರಿ ನೀನು ಸುಖವಾಗಿರು- ಎಂದು ಹೇಳಿ ಪ್ರಾಣವನ್ನು ಬಿಟ್ಟಿತು ಪುಣ್ಯ ಕೋಟಿಯು ತನ್ನನ್ನು ಕಾಪಾಡಿದ ದೇವರಿಗೆ ನಮಸ್ಕಾರ ಮಾಡಿ, ಹಿಂದಿರುಗಿ ಬಂದು ಕಂದನನ್ನು ಸೇರಿ ತನ್ನ ಜತೆಗಾತಿ ಯರಿಗೆ ನಡೆದುದನ್ನೆಲ್ಲ ಹೇಳಿ, ಸಂತೋಷದಿಂದಿದ್ದಿತು.

---

## ೧೫ ಪುಂಡರೀಕನು ಹಳ್ಳಕ್ಕೆ ಬಿದ್ದುದು

ದಂಡಕಾರಣ್ಯದಲ್ಲಿ ಪುಂಡರೀಕವೆಂಬ ಒಂದು ಸಲಗವು ಇದಿರಿಲ್ಲದೆ ಮೆರೆಯು ತ್ತಿದ್ದಿತು ಆ ಪುಂಡರೀಕನನ್ನು ನೋಡಿದರೆ ಸಾಕು, ಆ ಅರಣ್ಯದಲ್ಲಿದ್ದ ಮೃಗಗ ಳೆಲ್ಲ ಅಲ್ಲಲ್ಲೇ ಅಡಗಿ ಹೋಗುತ್ತಿದ್ದುವು ಇದು ಒಂದಾವೃತ್ತಿ ಕೂಗಿದರೆ ಮೃಗ ಗಳು ನಡುಗುತ್ತಿದ್ದವು ಈ ಆನೆಯು ವಾಸಮಾಡುತ್ತಿದ್ದ ಭಾಗದಲ್ಲಿ ನರಿಗಳು ಬಾಲಗಳನ್ನು ಮುದುರಿಕೊಂಡು ಮರಗಳ ಹಿಂದುಗಡೆ ಮೆತ್ತಗೆ ನುಸಿದು ಹೋಗು ತ್ತಿದ್ದುವು

ಒಂದು ರಾತ್ರಿ ಒಂದು ನರಿಯ ಮರಿಯು ಸ್ವಲ್ಪ ಕೂಗಲು ಮಲಗಿದ್ದ ಈ ಪುಂಡರೀಕವು ಎದ್ದು ತನ್ನ ಸೊಂಡಲಿಗೆ ಸಿಕ್ಕಿದ ನರಿಗಳನ್ನೆಲ್ಲ ಸುತ್ತಿಸಿ ಸುತ್ತಿಸಿ ಬಡಿದು ಹಾಕಿತು ಆಗ ಉಳಿದ ನರಿಗಳಿಗೆಲ್ಲ ಬಹು ಕೋಪ ಬಂದಿತು ಈ ಪುಂಡರೀಕವನ್ನು ಹೇಗಾದರೂ ಕೊಂದುಹಾಕಿದರೆ ನಮಗೆ ತೊಂದರೆ ತಪ್ಪುವುದು , ಇದಕ್ಕೆ ಏನಾದರೂ ಒಂದು ಉಪಾಯವನ್ನು ಹುಡಕಬೇಕು ಎಂದು, ಆ ಅರಣ್ಯ ದಲ್ಲಿದ್ದ ನರಿಗಳೆಲ್ಲ ಒಟ್ಟಿಗೆ ಸೇರಿದುವು ಯಾವ ನರಿಗೂ ಏನು ಉಪಾಯವೂ ತೋರಲಿಲ್ಲ ಕೊನೆಗೆ ಒಂದು ಮುದಿ ನರಿಯು ಎದ್ದುನಿಂತು, 'ನನಗೆ ಒಂದು ಉಪಾಯವು ತೋರುವುದು ಈ ಉಪಾಯವನ್ನು ನೆರವೇರಿಸುವುದರಲ್ಲಿ ನಾನು ಗೆದ್ದರೆ ನಮ್ಮ ಗುಂಪನ್ನೇ ಬದುಕಿಸಿದಂತೆ ಆಯಿತು ನಾನು ಸತ್ತರೆ, ನಾಳೆಯೋ ನಾಡಿದ್ದೋ ಸಾಯುವವನು ಈ ಹೊತ್ತೇ ಸತ್ತಂತೆ ಆಯಿತು ಆಗಲಿ, ನಿಮ್ಮಲ್ಲಿ ಬುದ್ಧಿವಂತರಾದವರು ಯಾರಾದರೂ ಹೋಗಿ, ಹತ್ತಿರದಲ್ಲಿ ಎಲ್ಲಾದರೂ ಒಂದು ದೊಡ್ಡಹಳ್ಳವಿದ್ದರೆ ನೋಡಿಕೊಂಡು ಬಂದು ಹೇಳಿ' ಎಂದಿತು

ಕೆಲವು ನರಿಗಳು ಓಡಿಹೋಗಿ, ಸ್ವಲ್ಪ ಹೊತ್ತಿನಲ್ಲಿಯೇ ಹಿಂದಿರುಗಿ ಬಂದು, ಸಮೀಪದಲ್ಲಿಯೇ ಒಂದು ದೊಡ್ಡ ಹಳ್ಳವಿರುವುದೆಂದು ಹೇಳಿದುವು ಆಗ ನರಿಯು ತನ್ನ ಗುಂಪಿಗೆ ಸಮಾಧಾನ ಹೇಳಿ, ಪುಂಡರೀಕದ ಬಳಿಗೆ ಹೋಗಿ ನಯ ಭಯ ಭಕ್ತಿ

ಯಿಂದ ನಮಸ್ಕಾರಮಾಡುವಂತೆ ನೆಲದಮೇಲೆ ಬಿದ್ದುಕೊಂಡಿತು. ಇದನ್ನು ನೋಡಿ ಆನೆಯು ಒಂದಾವೃತ್ತಿ ಕೂಗಲು, ನರಿಯು ಅಷ್ಟು ದೂರ ಹಿಂದಕ್ಕೆ ಹಾರಿಬಿದ್ದು ಗಡಗಡನೆ ನಡುಗುತ್ತ,—ಸ್ವಾಮಿ ! ನನ್ನದೊಂದು ಪ್ರಾರ್ಥನೆ ಇರುವುದು. ಲಾಲಿಸ ಬೇಕು, ?—ಎಂದಿತು.

'ಅದೇನು ?' ಎಂದು ಆನೆಯು ಕೇಳಲು, ನರಿಯು 'ಸ್ವಾಮಿ ಈ ದಂಡಕಾರಣ್ಯದಲ್ಲೆಲ್ಲ ತಮಗಿಂತ ಬಲಿಷ್ಠರಾದವರು ಯಾರೂ ಇಲ್ಲ ಆದುದರಿಂದ ತಮ್ಮನ್ನು ಈ ಅರಣ್ಯಕ್ಕೆ ರಾಜನನ್ನಾಗಿ ಮಾಡಬೇಕೆಂದು ಮೃಗಗಳಲ್ಲ ಸಿದ್ಧಮಾಡಿ ಕೊಂಡಿರುವುವು ತಾವು ಆ ಮರ್ಯಾದೆಯನ್ನು ಅಂಗೀಕರಿಸಬೇಕು' ಎಂದು ಬೇಡಿಕೊಂಡಿತು. ಮದಿಸಿದ ಈ ಆನೆಯು, ನರಿಯ ಸ್ತೋತ್ರಕ್ಕೆ ಬೆರಗಾಗಿ ಒಡನೆಯೆ ಸರಸರನೆ ಹೊರಟಿತು ದೂರದಲ್ಲಿದ್ದ ನರಿಗಳೆಲ್ಲವೂ, ಮುಂದೆ ಮುಂದೆ ದಾರಿ ತೋರಿಸುವುದಕ್ಕೆ ಓಡಿದುವು. ಆನೆಯು ಬುಡಬುಡನೆ ಓಡಿಹೋಗಿ ದೊಪ್ಪನೆ ಆ ಹಳ್ಳದಲ್ಲಿ ಬಿದ್ದಿತು ಆಗ ನರಿಯು 'ಅಯ್ಯೊ ! ರಾಜನೇ, ಮಹಾಬಲಶಾ ಲಿಯೆ, ನಿನಗೆ ಬಲವಿದ್ದರೆ, ನನ್ನ ಬಾಲವನ್ನು ಹಿಡಿದುಕೊಂಡು ಮೇಲಕ್ಕೆ ಹತ್ತಿಬಾ !' ಎಂದು ನಾಚಿಸಿತು ಆನೆಯು ಮೇಲಕ್ಕೆ ಬರಲಾರದೆ, ಅಲ್ಲಿಯೇ ಸತ್ತಿತು. ಆ ನರಿಗಳೆಲ್ಲ ಅದನ್ನು ಕಿತ್ತು ತಿಂದು ತೃಪ್ತಿಪಟ್ಟುವು

---

## ೧೬ ನಳಚರಿತ್ರೆ—(೧)

ನಿಷಧ ದೇಶವೆಂಬುದೊಂದು ರಾಜ್ಯ ಆ ರಾಜ್ಯಕ್ಕೆ ನಳರಾಯನು ದೊರೆ ಯಾಗಿದ್ದನು ಆ ಮಹಾರಾಜನು ಗುಣದಲ್ಲಿಯೂ, ರೂಪಿನಲ್ಲಿಯೂ ಎಲ್ಲರಿಗೂ ಮೇಲಾಗಿದ್ದ ದಮಯಂತಿಯನ್ನು ಮದುವೆಯಾಗಿ ಮಕ್ಕಳನ್ನು ಪಡೆದು ಸುಖ ವಾಗಿದ್ದನು

ದುಷ್ಟನಾದ ಕಲಿಪುರುಷನು ನಳನನ್ನು ಹಾಳುಮಾಡಬೇಕೆಂದಾಲೋಚಿಸಿ, ಅವನ ತಮ್ಮನಾದ ಪುಷ್ಕರನೆಂಬವನಿಗೆ ಸಹಾಯಕನಾಗಿ ನಿಂತು ನಳರಾಯನೊಡನೆ ಪಗಡೆಯ ಜೂಜನ್ನು ಆಡಿಸಿದನು ನಳನು ಜೂಜಿನಲ್ಲಿ ಸಕಲ ಸಂಪತ್ತನ್ನೂ ಸೋತು ದಮಯಂತಿಯೊಡನೆ ಕಾಡುಪಾಲಾದನು

ನಳನು ಮಕ್ಕಳನ್ನು ತನ್ನ ಮಾವಂದಿರ ಮನೆಗೆ ಕಳುಹಿಸಿ, ಹೆಂಡತಿಯನ್ನೂ ಅಲ್ಲಿಗೆ ಹೋಗೆಂದು ಬಹಳವಾಗಿ ಹೇಳಿದನು ಗುಣವತಿಯಾದ ದಮಯಂತಿಯು ಅದಕ್ಕೆ ಒಪ್ಪದೆ ಗಂಡನ ಕಷ್ಟವೇ ತನ್ನ ಕಷ್ಟವೆಂದು ತಿಳಿದು ಗಂಡನೊಡನೆಯೇ ಹೊರಟಳು ಹಾಗೆ ಹೋಗುತ್ತ ಒಂದು ರಾತ್ರಿ ಕಾಡಿನಲ್ಲಿ ದಮಯಂತಿಯು ಆಯಾಸದಿಂದ ಮೈಮರೆತು ನಿದ್ದೆಮಾಡುತ್ತಿದ್ದಳು ಅವಳ ಕಷ್ಟವನ್ನು ನೋಡಿ

ಸಹಿಸಲಾರದೆ, ತನ್ನ ಮಾವನದೇಶಕ್ಕೆ ಇದೇ ದಾರಿಯೆಂದು ತನ್ನ ರಕ್ತದಿಂದ ನೆಳಸು ಬರೆದಿಟ್ಟು, ಅವಳನ್ನು ಅಲ್ಲಿಯೇ ಬಿಟ್ಟು ಬಹು ಸಂಕಟದಿಂದ ಮುಂದೆ ಹೊರಟು ಹೋದನು.

ನಳನು ಹಾಗೆ ಹೋಗುತ್ತಿರುವಾಗ, ದಾರಿಯಲ್ಲಿ ಕಾಡುಕಿಚ್ಚನ್ನು ಕಂಡನು ಆ ಕಿಚ್ಚಿನಲ್ಲಿ ಯಾರೋ ಸಿಕ್ಕಿಕೊಂಡು ಅಳುತ್ತಿರುವ ಶಬ್ದವು ಕೇಳಬಂದಿತು ಕಷ್ಟ ಪಡುವವರನ್ನು ಕಾಪಾಡುವ ಸ್ವಭಾವವುಳ್ಳ ನಳನು ಬೇಗನೆ ಆ ಬೆಂಕಿಯ ಹತ್ತಿರ ಹೋದನು.

ಕಾರ್ಕೋಟಕನೆಂಬ ಸರ್ಪವು ಬೆಂಕಿಯಲ್ಲಿ ಬಿದ್ದು ಸಂಕಟಪಡುತ್ತಿದ್ದಿತು ಅದನ್ನು ಬೆಂಕಿಯಿಂದ ಎತ್ತಿ ಈಚೆಗೆ ಹಾಕಿದನು ಆಗ ಅದು ಅವನನ್ನು ಕಚ್ಚಿತು ಒಡನೆಯೇ ನಳನ ಮೈಯೆಲ್ಲ ಕಪ್ಪಗೆ ಗಂಟುಗಂಟಾಯಿತು ನಳನು ನೊಂದು ಕೊಂಡು ನಿಂತಿರಲು, ಕಾರ್ಕೋಟವು, "ಇದರಿಂದ ನಿನಗೆ ಪ್ರಯೋಜನವುಂಟು ನೀನು ಅಪೇಕ್ಷಿಸಿದಾಗ ನಿನ್ನ ರೂಪು ನಿನಗೆ ಬರುವುದು" ಎಂದು ಹೇಳಿ ಮಾಯ ವಾಯಿತು. ಹೀಗೆ ಕುರೂಪಿಯಾದ ನಳನು ಅಲ್ಲಿಂದ ಮುಂದೆ ಹೊರಟು ಋತು ಪರ್ಣರಾಯನಲ್ಲಿಗೆ ಹೋಗಿ ಕುದುರೆಯ ಚಾಕರಿಯಲ್ಲಿ ನಿಂತು ದಮಯಂತಿಯು ಏನಾದಳೋ ಎಂಬುದನ್ನೇ ಚಿಂತಿಸುತ್ತಿದ್ದನು

ಇತ್ತಲಾಗಿ ಗಂಡನಿಂದ ಬಿಡಲ್ಪಟ್ಟ ದಮಯಂತಿಯ ದುಃಖವನ್ನು ಎಷ್ಟೆಂದು ಹೇಳೋಣ! ಅಯ್ಯೋ ಕಷ್ಟ! ಕಷ್ಟ! ದಮಯಂತಿಯು ಕಾಡಿನಲ್ಲಿ ಒಬ್ಬಳೇ ಹೊರಟು, ಅನ್ನ ನೀರಿಲ್ಲದೆ ಕಾಡು ಮೃಗಗಳಿಗೆ ಹದರಿ, ಬೇಡನ ಕೈಗೆ ಸಿಕ್ಕಿಬಿದ್ದು, ಉಪಾಯದಿಂದ ತನ್ನ ಮಾನವನ್ನು ಉಳಿಸಿಕೊಂಡು, ಕಡೆಗೆ ತನ್ನ ತಂದೆಯ ಮನೆಯನ್ನು ಸೇರಿದಳು ಅದುವರೆಗೆ ಅವಳು ಪಟ್ಟ ಶ್ರಮವನ್ನು ಕೇಳಿದರೆ ಕಣ್ಣಿ ನಲ್ಲಿ ನೀರು ಬರುವುದು

---

## ೧೭ ನಳ ಚರಿತ್ರೆ—(೨)

ದಮಯಂತಿಯು ತಂದೆಯ ಮನೆಯನ್ನು ಸೇರಿದ್ದರೂ, ನಳನನ್ನು ಕಾಣದೆ, ಹೊಟ್ಟೆತುಂಬ ಊಟಮಾಡದೆ, ಕಣ್ಣುತುಂಬ ನಿದ್ರೆಮಾಡದೆ, ತಲೆಯ ಗಂಟನ್ನು ಸಹ ಬಿಚ್ಚದೆ, ಹರಕು ಸೀರೆಯನ್ನುಟ್ಟು, ಕೊರಗುತ್ತಿದ್ದಳು ಬಳಿಕ ಒಂದು ದಿನ ದಮಯಂತಿಯು ಪತಿಯನ್ನು ಹುಡುಕಲು ಜನರನ್ನು ಕಳುಹಿಸಿದಳು ಅವರು ಅಲ್ಲಲ್ಲಿ ಹುಡುಕಿ ಕೊನೆಗೆ ಋತುಪರ್ಣರಾಯನ ಪಟ್ಟಣದಲ್ಲಿ ನಳನು ತಲೆಮರಸಿ ಕೊಂಡು ಇರುವನೆಂದು ತಿಳಿಸಿದರು. ಈ ಸಮಾಚಾರವನ್ನು ತನ್ನ ತಂದೆಗೆ ಹೇಳಿ ದಳು. ಅವನು ಅಳಿಯನನ್ನು ಬರಮಾಡಿಕೊಳ್ಳುವುದಕ್ಕಾಗಿ, ದಮಯಂತಿಗೆ ಮತ್ತೆ ಮದುವೆಯೆಂದೂ ಮರು ದಿನವೇ ಲಗ್ನವೆಂದೂ ಋತುಪರ್ಣರಾಯನಿಗೆ ಹೇಳಿ ಕಳುಹಿಸಿದನು

ಋತುಪರ್ಣರಾಯನು ಈ ಸುದ್ಧಿಯನ್ನು ಕೇಳಿ ಆಶ್ಚರ್ಯಪಟ್ಟು, ನಾಳೆಯ ಮಧ್ಯಾಹ್ನದೊಳಗೇ ಹೇಗೆ ಹೋಗುವುದಕ್ಕೆ ಆದೀತೆಂದು ಚಿಂತಿಸುತ್ತಿದ್ದನು ಈ ವರ್ತಮಾನವನ್ನು ಕೇಳಿ ನಳನು ದುಃಖಪಟ್ಟು, ತಾನು ಕರೆದುಕೊಂಡು ಹೋಗುವೆನೆಂದು ಹೇಳಿ, ಒಳ್ಳೆಯ ಕುದುರೆಗಳನ್ನು ಕಟ್ಟಿ ರಥವನ್ನು ತಂದು ನಿಲ್ಲಿಸಿದನು ಋತುಪರ್ಣನೂ ರಥವನ್ನೇರಿದನು ರಥವು ಬಹು ವೇಗವಾಗಿ ಹೋಗುತ್ತಿದ್ದಿತು. ಋತುಪರ್ಣನು ದಾರಿಯಲ್ಲಿ ಕುದುರೆಯ ಪರೀಕ್ಷೆಯನ್ನು ತಿಳಿದ ನಳನಿಂದ ಕುದುರೆಯ ಪರೀಕ್ಷೆಯನ್ನು ಕಲಿತುಕೊಂಡು, ತಾನು ನಳನಿಗೆ ಪಗಡೆಯಾಟವನ್ನು ಚೆನ್ನಾಗಿ ಹೇಳಿಕೊಟ್ಟು, ಮುಂದೆ ಹೊರಟು ಮಧ್ಯಾಹ್ನಕಾಲಕ್ಕೆ ಮುಂದಾಗಿಯೆ ದಮಯಂತಿಯು ಇದ್ದ ಪಟ್ಟಣವನ್ನು ಸೇರಿದನು

ದಮಯಂತಿಯು ಕುರೂಪಿಯಾದ ನಳನೇ ತನ್ನ ಪತಿಯೆಂದು ಗೊತ್ತುಮಾಡಿಕೊಂಡು, "ನಿಮ್ಮನ್ನು ಇಲ್ಲಿಗೆ ಕರೆತರಿಸಲು ಈ ಉಪಾಯ ಮಾಡಿದೆನು ಕ್ಷಮಿಸಬೇಕು" ಎಂದು ಬೇಡಿಕೊಂಡಳು ನಳನು ನಿಜಸ್ಥಿತಿಯನ್ನು ತಿಳಿದು, ದಮಯಂತಿಯ ಸಾಹಸಕ್ಕೆ ಮೆಚ್ಚಿ, ಕಷ್ಟಗಳನ್ನೆಲ್ಲ ಜ್ಞಾಪಕಕ್ಕೆ ತಂದುಕೊಂಡು, ಕೊನೆಗೆ ತಮ್ಮಿಬ್ಬರನ್ನೂ ಪುನಃ ಸೇರಿಸಿದುದಕ್ಕಾಗಿ ಸಂತೋಷದಿಂದ ದೇವರನ್ನು ಸ್ತೋತ್ರಮಾಡಿದನು ತರುವಾಯ ನಳನು, ತನ್ನ ಮೊದಲಿನ ದೇಹ ಕಾಂತಿಯನ್ನು ಹೊಂದಿ, ತನ್ನ ರಾಜ್ಯವನ್ನು ಗೆದ್ದು, ಹಂಡತಿ ಮಕ್ಕಳೊಡನೆ ಸುಖವಾಗಿದ್ದನು

---

## ೧೮ ಕಾಗೆಯ ತಂತ್ರ

ಸಾಕಿದ ಒಂದು ದೊಡ್ಡನಾಯಿ ಕಣ್ಣನ್ನು ಅರ್ಧಮುಚ್ಚಿ ಮುಂದಿನ ಕಾಲುಗಳಿಂದ ಒಂದು ಮೂಳೆಯ ತುಣಕನ್ನು ಹಿಡಿದುಕೊಂಡು ಬಾಯಿಯಲ್ಲಿ ಕಡಿಯುತ್ತ ಸೋಮಾರಿಯಾಗಿ ಬಿದ್ದಿದ್ದಿತು ಆ ಮೂಳೆಯನ್ನು ಎತ್ತಿಕೊಂಡು ಹೋಗಬೇಕೆಂದು ಒಂದು ಕಾಗೆಯು ನಾಯಿಯ ಹತ್ತಿರಕ್ಕೆ ಬರುವುದು, ದೂರ ಹೋಗುವುದು, ಕೊಕ್ಕನ್ನು ಮಸೆವುದು, ಈ ರೀತಿಯಾಗಿ ನಾಯಿಯ ಇದಿರಿಗೆ ಆಟವನ್ನು ಕಟ್ಟಿತು. ನಾಯಿಯು ಮೂಳೆ ಕಡಿವುದನ್ನು ಸ್ವಲ್ಪ ಬಿಟ್ಟು ಇದರ ಆಟವನ್ನು ನೋಡುತ್ತಿದ್ದಿತೇ ಹೊರತು ಮೂಳೆಯನ್ನು ಮಾತ್ರ ಬಿಡಲಿಲ್ಲ

ಆಗ ಕಾಗೆಯು ಹಾರಿಹೋಗಿ ಇನ್ನೊಂದು ಕಾಗೆಯನ್ನು ಕರೆದುಕೊಂಡು ಬಂದು ಆ ಕಾಗೆಯೊಡನೆ ಏನೋ ಹೇಳಿದಂತೆ ಮಾಡಿತು ಆಗ ಆ ಕಾಗೆಯು ಹಾರಿಬಂದು ನಾಯಿಯ ಹಿಂದುಗಡೆ ಕುಳಿತುಕೊಂಡಿತು. ಈ ಕಾಗೆಯು ಮೊದಲಿನಂತೆ ಆಟ ಕಟ್ಟಿತು ನಾಯಿಯು ಕಾಗೆಯನ್ನು ನೋಡುತ್ತಿದ್ದಿತು ಆಟ ಕಟ್ಟುತಿದ್ದ ಕಾಗೆಯು ನಾಯಿಯ ಹತ್ತಿರಕ್ಕೆ ಬಂದ ಹೊತ್ತಿನಲ್ಲಿ ಹಿಂದೆ ಇದ್ದ ಕಾಗೆಯು ತನ್ನ ಕೊಕ್ಕಿನಿಂದ ನಾಯಿಯ ಬೆನ್ನಿನ ಮೇಲೆ ಬಲವಾಗಿ ಕುಕ್ಕಿತು ನಾಯಿಯು ಔ ಎಂದು ಗಾಬರಿಯಾಗಿ, ಮೂಳೆಯನ್ನು ಬಿಟ್ಟು ಹಿಂದಿರುಗಿತು. ಒಡನೆಯೇ ಆಟ ಕಟ್ಟಿದ್ದ ಕಾಗೆಯು ಆ ಮೂಳೆಯನ್ನು ಕಚ್ಚಿಕೊಂಡು ಹಾರಿಹೋಯಿತು

## ೧೯. ಕೋತಿಯ ನ್ಯಾಯ

ಎರಡು ಬೆಕ್ಕುಗಳು ಒಂದು ಸೇರಿನಷ್ಟು ಬೆಣ್ಣೆಹಾಕಿ ಅಟ್ಟದಮೇಲೆ ಇಟ್ಟಿದ್ದ ಬಟ್ಟಲನ್ನು ಬಹಳ ಹೊತ್ತು ಹೊಂಚುಹಾಕಿಕೊಂಡಿದ್ದು, ಕೊನೆಗೆ ಸಾಗಿಸಿಕೊಂಡು ಬಂದುವು ತರುವಾಯ ಆ ಬೆಣ್ಣೆಯನ್ನು ಹಂಚಿಕೊಳ್ಳುವುದರಲ್ಲಿ ಒಂದೊಂದಕ್ಕೆ ಜಗಳವುಂಟಾಯಿತು ಬಹಳ ಹೊತ್ತು ಬಹು ಕೋಪದಿಂದ ಕಾದಾಡುತ್ತಿದ್ದುವು

ಅಷ್ಟರಲ್ಲಿಯೇ ಅಲ್ಲಿಗೆ ಒಂದು ಕೋತಿಯು ಬಂದು ಆ ಬೆಕ್ಕುಗಳು ಜಗಳವಾಡುವುದನ್ನು ನೋಡಿ, ಅವನ್ನು ಸಮಾಧಾನಪಡಿಸಿ ಜಗಳಕ್ಕೆ ಕಾರಣವೇನೆಂದು ಕೇಳಿತು ಅವೆರಡೂ, ಬೆಣ್ಣೆಯ ಸಂಗತಿಯನ್ನು ಹೇಳಲು, ಕೋತಿಯು 'ಅಯ್ಯೋ ! ಇದಕ್ಕೇಕೆ, ಇಷ್ಟು ಜಗಳ ? ನನ್ನಲ್ಲಿ ತಕ್ಕಡಿ ಇದೆ, ನಾನು ಸರಿಯಾಗಿ ಹಂಚುತ್ತೇನೆ, ಬನ್ನಿ ' ಎಂದು ಕರೆದುಕೊಂಡು ಹೋಗಿ, ಒಂದು ತಕ್ಕಡಿಯನ್ನು ಎತ್ತಿಕೊಂಡು ಬಂದು, ಬೆಣ್ಣೆಯನ್ನು ತಕ್ಕಡಿಯ ಎರಡು ತಟ್ಟೆಗೂ ಹಾಕಿತು

ಬೆಕ್ಕುಗಳು ಸಂತೋಷದಿಂದ ಈ ತಟ್ಟೆಯ ಕಡೆ ಒಂದು, ಆ ತಟ್ಟೆಯ ಕಡೆ ಒಂದು, ಕುಳಿತುಕೊಂಡುವು ಕೋತಿಯು ತಕ್ಕಡಿಯನ್ನು ಹಿಡಿದು, ಈ ಕಡೆ ಸ್ವಲ್ಪ ಹಚ್ಚಿರುವುದೆಂದು ಈ ತಟ್ಟೆಯ ಬೆಣ್ಣೆಯಲ್ಲಿ ಸ್ವಲ್ಪ ತಿನ್ನುತ್ತ ಆಕಡೆ ಸ್ವಲ್ಪ ಹಚ್ಚೆಂದು ಆ ತಟ್ಟೆಯಲ್ಲಿದ್ದ ಬೆಣ್ಣೆಯಲ್ಲಿ ಸ್ವಲ್ಪ ತಿನ್ನುತ್ತ ಕೊನೆಗೆ ಬರಿಯ ತಟ್ಟೆ ಮಾಡಿಬಿಟ್ಟಿತು ಬೆಕ್ಕುಗಳು ಕಣ್ಣುಕಣ್ಣು ಬಿಡುತ್ತ ಬಾಲ ಮುದುರಿಕೊಂಡು ಹೋದುವು

---

## ೨೦. ಸಾಕಿದ ಹುಲಿಯ ಮರಿ

ಬಂಗಾಳ ದೇಶದಲ್ಲಿ ಒಬ್ಬ ಸರದಾರನು ಒಂದ ಚಿಕ್ಕ ಹುಲಿಯ ಮರಿಯನ್ನು ಸಾಕುತ್ತಿದ್ದನು ಆ ಮರಿಯು ಆ ಸರದಾರನಿಗೆ ಆ ದೇಶದ ಕಾಡಿನಲ್ಲಿ ಸಿಕ್ಕಿದಾಗ ಅದು ಎಂಟು ಹತ್ತು ದಿವಸದ ಮರಿ ಅಂದಿನಿಂದಲೂ ಆ ಸರದಾರನೇ ಅದನ್ನು ಹಾಲು ಹಾಕಿ ಸಾಕುತ್ತ ಬಂದನು ಅದು ನಾಯಿ ಮರಿಯಂತೆ ಹತ್ತಿರದಲ್ಲೇ ಆಡುತ್ತ ಇರುತ್ತಿದ್ದಿತು

ಹೀಗಿರುತ್ತಿರಲು ಒಂದುದಿನ ಸಾಯಂಕಾಲ ಆ ಸರದಾರನು ತನ್ನ ಬಂಗಲೆಯ ಪಡಸಾಲೆಯಲ್ಲಿ ಒಂದು ಕುರ್ಚಿಯ ಮೇಲೆ ಕುಳಿತು ಒಂದು ಕೈಯಲ್ಲಿ ಪುಸ್ತಕವನ್ನು ಹಿಡಿದುಕೊಂಡು ಓದುತ್ತ, ಇನ್ನೊಂದು ಕೈಯಲ್ಲಿ ಹುಲಿಮರಿಯನ್ನು ಆಡಿಸುತ್ತ ಇದ್ದನು. ಹುಲಿಯ ಮರಿಯು ಪ್ರೀತಿಯಿಂದ ಇವನ ಕೈಯನ್ನು ನೆಕ್ಕುತಿದ್ದಿತು. ಸರದಾರನು ಅದರ ಕಡೆಗೆ ನೋಡದೆ ಓದುತಿದ್ದನು ಹುಲಿಯ ಮರಿಯು ನೆಕ್ಕುತ್ತಿದ್ದಹಾಗೆ ಗುರ್ರೆನುತ್ತ ಶಬ್ದ ಮಾಡಿತು ಸರದಾರನು ಇತ್ತಲಾಗಿ ತಿರುಗಿ ನೋಡಿದನು ಅವನ ಕೈಯೆಲ್ಲ ರಕ್ತ ರಕ್ತವು ಅವನ ಕೈಯಿಂದ ಹರಿದು

ಹೋಗುತಿದ್ದಿತು. ನಾಯಿಯು ಕೈಯನ್ನು ನೆಕ್ಕಿದ್ದರೆ ಹೀಗೆ ರಕ್ತ ಬರುತ್ತಿರಲಿಲ್ಲ. ಹುಲಿಯ ನಾಲಗೆಯ ಮೇಲೆ ಇರುವಂತೆ ನಾಯಿಯ ನಾಲಗೆಯ ಮೇಲೆ ಮುಳ್ಳುಗಳಿಲ್ಲ. ಹುಲಿಯ ಮರಿಯು ಮೊದಲು ನೆಕ್ಕಿದಾಗ ಇವನಿಗೆ ಗೊತ್ತಾಗಲೇ ಇಲ್ಲ. ಅದು ನೆಕ್ಕುತ್ತ ನೆಕ್ಕುತ್ತ ಇವನ ಕೈಯಿಂದ ರಕ್ತ ಬರಲು, ಅದು ರುಚಿ ಕಂಡುಕೊಂಡು ಗುರ್ರೆಂದಿತು

ಇದು ರಕ್ತದ ರುಚಿ ಕಂಡಮೇಲೆ, ನಾನು ನನ್ನ ಕೈಯನ್ನು ಸೆಳೆದುಕೊಂಡರೆ ಮೇಲೆ ಬೀಳುವುದೆಂದು ತಿಳಿದು, ಕೈಯನ್ನು ಸೆಳೆದುಕೊಳ್ಳದೆ ಹಾಗೆಯೆ ಬಿಟ್ಟು ಜವಾನನನ್ನು ಕೂಗಿ ' ನನ್ನ ಕೊಠಡಿಯೊಳಗೆ ಹೋಗಿ ಪಿಸ್ತೂಲನ್ನು ತಂದು ಸರಿಯಾಗಿ ಗುರಿಯಿಟ್ಟು, ಇದನ್ನು ಹೊಡೆದು ಕೊಲ್ಲು ಬೇಗ ಬಾ ಸದ್ದು ಮಾಡಬೇಡ, ಎಂದನು ಹುಲಿಯ ಮರಿಗೆ ರಕ್ತದ ರುಚಿ ಏರಿ ಸರಸರನೆ ರಕ್ತವನ್ನು ಹೀರುತಿದ್ದಿತು. ಅಷ್ಟರಲ್ಲೇ ಜವಾನನು ಬಂದು ಒಂದೇ ಏಟಿನಲ್ಲಿ ಹುಲಿಯ ಮರಿಯನ್ನು ಹೊಡೆದು ಮಲಗಿಸಿದನು.

---

## ೨೧. ವಿಧೇಯತೆ

ಬೆಂಗಳೂರು ರೈಲ್ ಸ್ಟೇಷನ್ನಿನ ಹಾಗೆ ಒಂದು ದೊಡ್ಡ ಸ್ಟೇಷನ್ ಅಲ್ಲಿ ಮೂರು ನಾಲ್ಕು ಕಡೆಗಳಿಂದ ರೈಲ್ ರಸ್ತೆಗಳು ಬಂದು ಸೇರುತ್ತಿದ್ದುವು ಸ್ಟೇಷನ್ನಿಗೆ ಸಮೀಪವಾಗಿಯೇ, ಎರಡು ಹಾದಿ ಕೂಡುವ ಒಂದು ಮೂಲೆ. ಆ ಮೂಲೆಯನ್ನು ಕಾಯುವುದಕ್ಕೆ ಒಬ್ಬ ಮನುಷ್ಯನು ಇದ್ದನು. ಆ ಮೂಲೆಯ ಹತ್ತಿರಕ್ಕೆ ಒಂದೇ ಕಾಲದಲ್ಲಿ, ಇದಿರುಬದಿರಾಗಿ ಎರಡು ಹೊಗೆಬಂಡಿಗಳು ಬರುತಿದ್ದುವು ಆ ಕಾಲಕ್ಕೆ ಸರಿಯಾಗಿ ಈ ಮನುಷ್ಯನು ಅಲ್ಲಿದ್ದು, ಒಂದು ಯಂತ್ರದ ಸಹಾಯದಿಂದ, ಹೊಗೆ ಬಂಡಿಗಳು ಒಂದಕ್ಕೊಂದು ಡಕ್ಕೆ ಹೊಡೆಯದ ಹಾಗೆ, ಅವುಗಳನ್ನು ಬೇರೆ ಬೇರೆ ದಾರಿಯಲ್ಲಿ ಹೋಗುವಂತೆ ಮಾಡುತಿದ್ದನು

ಒಂದು ದಿನ ಬಂಡಿಗಳು ಬರುವ ಸಮಯವಾಗಿದ್ದಿತು. ಆ ಮನುಷ್ಯನೂ ತನ್ನ ಸ್ಥಳದಲ್ಲಿ ಸಿದ್ಧನಾಗಿ ನಿಂತಿದ್ದನು ಆಗ ಒಂದು ಬಂಡಿಯು ಬಂದಿತು ಇನ್ನೊಂದು ಬಂಡಿಯು ಕಂಬಿಯ ಮೇಲೆ ಸ್ವಲ್ಪ ದೂರದಲ್ಲಿಯೇ ಬರುತಿದ್ದುದು ಕಾಣುತಿದ್ದಿತು. ಇಷ್ಟರಲ್ಲಿ ಅವನ ಏಳು ವರ್ಷದ ಮಗನೊಬ್ಬನು ಅಲ್ಲಿಯೆ ಆಡುತಿದ್ದು ಬಂಡಿಯು ಬರುವವೇಳೆಗೆ ಸರಿಯಾಗಿ ತಂದೆಯನ್ನು ಕೂಗಿಕೊಂಡು ಕಬ್ಬಿಣದ ಕಂಬಿಯಮೇಲೆ ಬಂದನು. ಆಗ ಆ ತಂದೆಯ ಮನಸ್ಸು ಹೇಗೆ ಇರಬೇಕು ! ನೀವೇ ಆಲೋಚಿಸಿ.

ಮಗನನ್ನು ಎತ್ತಿಕೊಂಡು ಬರುವುದಕ್ಕೆ ಹೋದರೆ, ಬಂಡಿಗಳು ಎರಡೂ ಒಂದೇ ಕಂಬಿಯ ಮೇಲೆಹೋಗಿ, ಢಕ್ಕೆ ತಗಲಿ, ಬಂಡಿಗಳಲ್ಲಿದ್ದ ಸಾವಿರಾರು ಮಂದಿ ಸಾಯುವರು. ಮಗನು ಕಂಬಿಯಮೇಲೆ ಇದ್ದರೆ ಒಂದು ಕ್ಷಣದಲ್ಲಿ ಬಂಡಿಗೆ ಸಿಕ್ಕಿ

ಚೂರು ಚೂರು ಆಗುವನು ಮಗನನ್ನು ಬದುಕಿಸಿಕೊಳ್ಳಬೇಕೆಂದರೆ ನೂರಾರು ಮಂದಿ ಸಾಯುವರು. ನೂರಾರು ಮಂದಿಯನ್ನು ಉಳಿಸಬೇಕಂದರೆ ತನ್ನೊಬ್ಬನೇ ಮಗನು ಸಾಯುವನು. ಅವನಿಗೆ ಆಲೋಚಿಸುವುದಕ್ಕೂ ಹೊತ್ತಿಲ್ಲ. ಬಂಡಿಯು ಬಂದೇ ಬಂದಿತು. ಆಗ ಅವನ ಮನಸ್ಸಿಗೆ ನೂರಾರು ಮಂದಿಯನ್ನು ಬದುಕಿಸುವುದೇ ಧರ್ಮವೆಂದು ತೋರಿತು. ಮಗನನ್ನು ಎರಡು ಕಂಬಿಗಳ ಮಧ್ಯೇ ಮಲಗಿಸಿದರೆ ಬಂಡಿಯು ಒಂದು ನಿಮಷದಲ್ಲಿ ಹೊರಟುಹೋಗುವುದು, ಮಗನು ಬದುಕಿದರೂ ಬದಕಬಹುದು. ನೂರಾರು ಮಂದಿಯಂತೂ ಬದುಕೇ ಬದುಕುವರು ಎಂದಾಲೋಚಿಸಿ, ಹುಬ್ಬು ಗಂಟಿಕ್ಕಿ, ಮಗನ ಕಡೆಗೆ ತಿರುಗಿ ' ಅಲ್ಲಿಯ ಮಲಗಿಕೊ ಬೇಗ ' ಎಂದು ಹೇಳಿ ದೇವರನ್ನು ಮನಸ್ಸಿನಲ್ಲಿ ಪ್ರಾರ್ಥಿಸಿ ಯಂತ್ರವನ್ನು ನಿತ್ಯದಂತೆ ತಿರುಗಿಸಿದನು.

ಬಂಡಿಯು ಬಂದಿತು ಆ ಮನುಷ್ಯನ ಕಣ್ಣಿನಲ್ಲಿ ನೀರು ಸುರಿಯುತಿದ್ದಿತು. ಆ ಬಂಡಿಗಳೊಳಗೆ ಇದ್ದವರಿಗೆ ಇವನ ದುಃಖವೇನು ಗೊತ್ತು? ಅಯ್ಯೊ ! ಆ ಒಂದು ನಿಮಿಷ ಆತನಿಗೆ ಒಂದು ವರ್ಷವಾಯಿತು ಬಂಡಿಗಳು ಹೊರಟುಹೋದುವು ಮಗನು ಮಾಂಸದ ಮುದ್ದೆಯಾಗಿ ಕಾಣಬರುವನೆಂದು ಬಹು ಸಂಕಟದಿಂದ ಬೇಗನೆ ತಿರುಗಿದನು ಆಗ ಅವನ ಸಂತೋಷವು ಎಷ್ಟೆಂದು ಹೇಳೋಣ ತಂದೆಯು ಹೇಳಿದಂತೆ ಆ ಹುಡುಗನು ನೆಲಕ್ಕೆ ಹತ್ತಿ ಮಲಗೇ ಇದ್ದನು ಅವನ ತಲೆಯ ಮೇಲಣ ಕೂದಲೂ ಅಳ್ಳಾಡಿರಲಿಲ್ಲ. ಆಗ ತಂದೆಯು ಮಗನನ್ನು ಬಾಚಿ ತಬ್ಬಿಕೊಂಡು ಹೇಳಿದ ಮಾತನ್ನು ಕೇಳತಕ್ಕ ಮಗನನ್ನು ಕೊಟ್ಟುದಕ್ಕಾಗಿ ದೇವರನ್ನು ಸ್ತೋತ್ರ ಮಾಡಿದನು ನೂರಾರು ಮಂದಿಯನ್ನುಳಿಸುವುದಕ್ಕಾಗಿ ತನ್ನ ಮಗನು ಸತ್ತರೂ ಸಾಯಲೆಂದು, ಅವನು ಮಾಡಿದ ಮನಸ್ಸಿನ ಧೈರ್ಯವು ಎಷ್ಟು ಶ್ಲಾಘ್ಯವಾದುದು !

---

## ೨೨. ಜಂಭಗಾರ

ದೇಶದೇಶಗಳ ಮೇಲೆ ಅಲೆಯುತ್ತಿದ್ದ ಒಬ್ಬನು ಬಹುಕಾಲದ ಮೇಲೆ ತನ್ನ ಊರಿಗೆ ಬಂದನು. ಅಲ್ಲಿ ನೆರೆಹೊರೆಯವರಿಗೆ ತಾನು ನೋಡಿದ ಊರುಗಳನ್ನೂ, ಜನಗಳನ್ನೂ ತಾನು ಅಲ್ಲಲ್ಲಿ ಮಾಡಿದ ಸಾಹಸಗಳನ್ನೂ ಬಣ್ಣಿಸಲಿಕ್ಕೆ ಮೊದಲು ಮಾಡಿದನು. ಇವನ ಕಥೆಯನ್ನು ಕೇಳಲಿಕ್ಕೆ ಅನೇಕರು ಬರುತ್ತಿದ್ದರು. ಒಂದು ದಿನ ಬಹು ಜನರು ಸೇರಿದ್ದರು ಆಗ ಅವನು ' ಗಂಗಾನದಿಯ ಒಂದು ದೊಡ್ಡ ಕಾಲುವೆಯನ್ನು ಹಾರಿ ಕಾಲಿಗೆ ಒಂದು ತೋಡೆಯನ್ನು ಹಾಕಿಸಿಕೊಂಡಿದ್ದೆನು. ನಾನು ಹಾರಿದಾಗ ಇದ್ದವರು ಇಲ್ಲಿ ಯಾರೂ ಇಲ್ಲವಲ್ಲ, ಇದ್ದರೆ ಹೇಳಿಸುತಿದ್ದೆನು ' ಎಂದನು

ಅಷ್ಟರಲ್ಲಿಯೆ, ಆ ಗುಂಪಿನಲ್ಲಿದ್ದವನೊಬ್ಬನು ' ನೀನು ಹೇಳುವುದು ನಿಜವಾದರೆ ಸಾಕ್ಷಿ ಏಕೆ ? ಗಂಗಾನದಿಯ ದೊಡ್ಡ ಕಾಲುವೆಯನ್ನು ಹಾರಿದವನು, ಇಲ್ಲಿ ಈಗ ಈ ಅಂಕಣದಿಂದ ಆ ಅಂಕಣಕ್ಕೆ ಹಾರಲಾರೆಯಾ ! ಎಲ್ಲಿ ಹಾರು, ನೋಡೋಣ ಎಂದನು. ಆ ಜಂಬಗಾರನು ಬೆಪ್ಪಾದನು.

---

## ೨೩ ಸಂಯುಕ್ತೆ—(೧)

ಸಂಯುಕ್ತೆಯು ಜಯಚಂದ್ರ ಮಹಾರಾಜನ ಮಗಳು. ಜಯಚಂದ್ರನು ಕನ್ಯಾಕುಬ್ಜದಲ್ಲಿ ಆಳುತಿದ್ದನು. ಇವನು ಅನೇಕ ರಾಜರನ್ನು ಗೆದ್ದಿದ್ದನು. ಆದುದರಿಂದ ತಾನು ರಾಜಾಧಿರಾಜನೆಂಬ ಬಿರುದನ್ನು ವಹಿಸುವುದಕ್ಕಾಗಿ ಸುತ್ತು ಮುತ್ತಲಿದ್ದ ದೇಶಾಧಿಪತಿಗಳಿಗೆಲ್ಲ ಕನ್ಯಾಕುಬ್ಜಕ್ಕೆ ಬರುವಂತೆ ಹೇಳಿಕಳುಹಿಸಿದನು. ದೇಹಲಿಗೆ ಅರಸಾದ ಪೃಥ್ವೀರಾಜ ಅವನ ಮಿತ್ರನಾದ ಸಮರಸಿಂಹ ಇವರಿಬ್ಬರು ವಿನಾ ಉಳಿದವರೆಲ್ಲರೂ ಬಂದರು ಅವರಿಬ್ಬರೂ ಬರಲಿಲ್ಲವೆಂದು ಜಯಚಂದ್ರನಿಗೆ ಕೋಪ ಬಂದಿತು ಆಗ ಜಯಚಂದ್ರನು ಅವರಿಗೆ ಅಪಮಾನಮಾಡಬೇಕೆಂದು, ಪೃಥ್ವೀರಾಜ ಸಮರಸಿಂಹರಂತೆ ಭಂಗಾರದಲ್ಲಿ ಬೊಂಬೆಗಳನ್ನು ಮಾಡಿಸಿ, ಒಂದಕ್ಕೆ ದ್ವಾರ ಪಾಲಕನ ಉಡುಪನ್ನೂ ಮತ್ತೊಂದಕ್ಕೆ ಅಡಿಗೆಯವನ ಉಡುಪನ್ನೂ ಹಾಕಿಸಿ ಅವನ್ನು ಸಭಾಮಂಟಪದ ಬಾಗಿಲಲ್ಲಿ ಇಡಿಸಿದನು

ಆಗ ಕನ್ಯಾಕುಬ್ಜಕ್ಕೆ ಬಹುಮಂದಿ ರಾಜರು ಬಂದಿದ್ದರಾದುದರಿಂದ ಆ ಸಮಯದಲ್ಲಿಯೇ ಸಂಯುಕ್ತೆಗೆ ಲಗ್ನ ಮಾಡಬೇಕೆಂದಾಲೋಚಿಸಿ ಜಯಚಂದ್ರನು ಸಂಯುಕ್ತೆಯನ್ನು ಕರೆದು ' ಅನೇಕ ಮಂದಿ ರಾಜ, ರಾಜರೂ, ರಾಜಕುಮಾರರೂ ಬಂದಿರುವರು ಅವರಲ್ಲಿ ನಿನಗೆ ಬೇಕಾದವರನ್ನು ವರಿಸು ನೀನು ಒಪ್ಪುವ ವರನಿಗೆ ನಿನ್ನನ್ನು ಕೊಟ್ಟು ವಿವಾಹ ಮಾಡುವೆನು ' ಎಂದು ತಿಳಿಸಿದನು

ಸ್ವಯಂವರ ಮಂಟಪವು ಸಿದ್ಧವಾಗಿ, ಧ್ವಜ ಪತಾಕ ತೋರಣಗಳಿಂದಲಂಕೃತವಾಯಿತು ಆ ಮಂಟಪದ ಥಳಥಳಿಸುವ ಆನೆಯ ಬಾಗಿಲ ಎರಡು ಪಕ್ಕದಲ್ಲೂ ಪೃಥ್ವೀರಾಜ ಸಮರಸಿಂಹರ ಭಂಗಾರದ ಪ್ರತಿಮೆಗಳು ಇದ್ದುವು ಅಲ್ಲಿ ಜಯಚಂದ್ರನ ಪ್ರತಾಪವನ್ನೂ ಬಿರುದಾವಳಿಗಳನ್ನೂ ಕೈಗಳನ್ನೆತ್ತಿ ಹೂಗಳುತ್ತಿದ್ದ ಭಟ್ಟರಾಜರೂ, ಮಂಟಪದ ಒಳಭಾಗದಲ್ಲಿ ರಾಜರುಗಳಿಗೂ ರಾಜಕುಮಾರರಿಗೂ ಅವರವರಿಗೆ ತಕ್ಕ ಉಪಚಾರವನ್ನು ಮಾಡಲು ಸಿದ್ಧರಾಗಿರುವ ಜಯಚಂದ್ರನ ಬಂಧುಮಿತ್ರರೂ, ಇದ್ದರು.

ಇಷ್ಟರಲ್ಲಿಯೇ ನಾನಾದೇಶದ ರಾಜರೂ ರಾಜಕುಮಾರರೂ ಅಲಂಕೃತರಾಗಿ, ಸ್ವಯಂವರ ಮಂಟಪಕ್ಕೆ ಬಂದು ಉಚಿತಾಸನಗಳಲ್ಲಿ ಕುಳಿತು ಸಂಯುಕ್ತೆಯ ಬರುವಿಕೆಯನ್ನೇ ಇದಿರು ನೋಡುತ್ತ ಬಹು ಕುತೂಹಲವಿಶಿಷ್ಟರಾಗಿದ್ದರು ಸುಗುಣೆಯಾದ ಸಂಯುಕ್ತೆಯು ವರಣ ಮಾಲೆಯನ್ನು ಹಿಡಿದುಕೊಂಡು, ಸಖೀಜನರೊಡಗೂಡಿ, ಸಭಾ ಮಂಡಪವನ್ನು ಪ್ರವೇಶಿಸಿದಳು ಆಗ ಆ ಮಂಟಪವೆಲ್ಲ ಸಂಯುಕ್ತಾಮಯವಾಯಿತು ಎಲ್ಲೆಲ್ಲೂ ಸಂಯುಕ್ತೆಯೇ ಕಾಣುತ್ತಿದ್ದಳು, ರಾಜರ ಮನಸ್ಸಿನಲ್ಲಿದ್ದ ಸಂಯುಕ್ತೆಯು ಪ್ರತ್ಯಕ್ಷಳಾಗಿ ಅಲ್ಲಿದ್ದ ರನ್ನಗನ್ನಡಿ ನಿಲುಗನ್ನಡಿಗಳಲ್ಲೆಲ್ಲ ಪ್ರತಿಫಲಿಸುತ್ತಿದ್ದಳು

ಆಗ ಸಖಿಯೊಬ್ಬಳು ಅಲ್ಲಿ ಸೇರಿದ್ದ ರಾಜ ರಾಜಕುಮಾರರ ಗುಣಾತಿಶಯಗಳನ್ನು ಸಂಯುಕ್ತೆಗೆ ತಿಳಿಸುತ್ತ—ಈತನು ಮಹಾ ಶೂರನು, ಈತನು ಒಳ್ಳೆಯ ಪಂಡಿತನು, ಈತನು ಕುದುರೆಯೇರುವುದರಲ್ಲಿ ನಿಪುಣನು, ಈತನು ಧನುರ್ವಿದ್ಯೆಯಲ್ಲಿ

ಪ್ರವೀಣನು-ಎಂದು ವರ್ಣಿಸುತಿರಲು, ಅವಳು ಕೇಳುತ್ತ ಅವರನ್ನು ನೋಡುತ್ತ, ಮೆಲ್ಲಮೆಲ್ಲನೆ ಮುಂದೆ ಮುಂದೆ ಹಜ್ಜೆಯನ್ನಿಡುತ್ತಿದ್ದಳು ಆ ರಾಜರಲ್ಲಿ ಯಾರನ್ನೂ ಒಪ್ಪದೆ ಅವಳು ಮುಂದೆ ಹಜ್ಜೆಯಿಡಲು ಆ ಜಯಚಂದ್ರನಿಗೆ ಕೋಪಬಂದು, ಮಂಟಪದ ಬಾಗಿಲಲ್ಲಿರುವ ಪೃಥ್ವೀರಾಜ ಸಮರಸಿಂಹರನ್ನು ಸಂಯುಕ್ತೆಗೆ ತೋರಿಸೆಂದನು

ಪೃಥ್ವೀರಾಜನ ಪರಾಕ್ರಮವನ್ನೂ ಕೀರ್ತಿಯನ್ನೂ ಕೇಳಿದ್ದಳಾದುದರಿಂದ, ಅವಳು ಅಲ್ಲಿಗೆ ಬಂದು ಪೃಥ್ವೀರಾಜನ ಪ್ರತಿಮೆಯನ್ನು ನೋಡಿ ಸಂತೋಷದಿಂದ ಆ ಪ್ರತಿಮೆಗೇ ಹಾರವನ್ನು ಹಾಕಿಬಿಟ್ಟಳು ಜಯಚಂದ್ರನಿಗೆ ಬಹಳ ಅಸಮಾಧಾನವಾಯಿತು. ಅಲ್ಲಿ ಬಂದಿದ್ದ ರಾಜರೆಲ್ಲರೂ ಖಿನ್ನರಾಗಿ ಹೊರಟುಹೋದರು

---

## ೨೪. ಸಂಯುಕ್ತೆ—(೨)

ಈ ವರ್ತಮಾನವನ್ನು ಪೃಥ್ವೀರಾಜನು ಕೇಳಿ, ಸಂಯುಕ್ತೆಯನ್ನೇ ಮದುವೆಯಾಗಬೇಕೆಂದು, ಒಂದು ದೊಡ್ಡ ಸೈನ್ಯದೊಡನೆ ದಹಲಿಯಿಂದ ಕನ್ಯಾಕುಬ್ಜಕ್ಕೆ ಹೊರಟು, ಜಯಚಂದ್ರನೊಡನೆ ಹೋರಾಡಿ ಸಂಯುಕ್ತೆಯನ್ನು ಕರೆದುಕೊಂಡು ಹೋದನು. ಇದರಿಂದ ಜಯಚಂದ್ರನಿಗೆ ರೋಷವು ಹೆಚ್ಚಿತು ಅಳಿಯನಾದ ಪೃಥ್ವೀರಾಜನನ್ನು ನಾಶಮಾಡಬೇಕೆಂಬುದೇ ಇವನ ಹಟವಾಯಿತು

ಇತ್ತಲಾಗಿ ಪೃಥ್ವೀರಾಜನು ಸಂಯುಕ್ತೆಯನ್ನು ಮದುವೆ ಮಾಡಿಕೊಂಡು, ರಾಜಕಾರ್ಯಗಳನ್ನು ಬಿಟ್ಟು, ಪ್ರಜೆಗಳ ಕ್ಷೇಮ ಚಿಂತನೆಯನ್ನು ಮಾಡದೆ, ದೇಶವನ್ನು ಬಲಪಡಿಸದೆ, ಸಂಯುಕ್ತೆಯೊಡನೆ ವಿನೋದದಲ್ಲಿ ಕಾಲವನ್ನು ಕಳೆಯುತ್ತಿದ್ದನು. ಈ ಸಮಯದಲ್ಲಿ ಆಫ್‌ಘಾನಿಸ್ಥಾನದಲ್ಲಿದ್ದ ಮಹಮ್ಮದ್ ಘೋರಿಯು ಮುಸಲ್ಮಾನರೊಡನೆ, ಹಿಂದೂ ದೇಶಕ್ಕೆ ದಂಡೆತ್ತಿಬಂದನು ಈ ವರ್ತಮಾನವನ್ನು ಕೇಳಿ ರಾಜಪುತ್ರಿಯಾದ ಸಂಯುಕ್ತೆಯು ದೇಶಕ್ಕೆ ಬಂದ ವಿಪತ್ತನ್ನು ಮೊದಲು ಹೋಗಲಾಡಿಸಬೇಕೆಂದು ಗಂಡನಿಗೆ ಹೇಳಿ ಯುದ್ಧಕ್ಕೆ ಬೇಕಾದುದನ್ನೆಲ್ಲ ತಾನೆ ಸಿದ್ಧಮಾಡಿಟ್ಟಳು ಅಷ್ಟೇ ಅಲ್ಲದೆ,, 'ನಿಮಗೆ ಜಯವಾಗಲಿ, ನಿಮಗೆ ಸಮಾನರಿಲ್ಲ ಸಾವು ಯಾರಿಗೂ ತಪ್ಪದು ನೀವು ಸಾವಿಗೆ ಅಂಜದೆ, ದೇಶದ ಮೇಲಿನ ಮಮತೆಯಿಂದ, ಧೈರ್ಯವಾಗಿ ಹೋರಾಡಿ ಶತ್ರುಗಳನ್ನು ಸೋಲಿಸಿರಿ ಇದರಿಂದ ನಿಮಗೆ ಯಶಸ್ಸುಂಟು ನಮ್ಮಾಸುಖವು ಬಹುಕಾಲವಿರತಕ್ಕುದಲ್ಲ. ನೀವು ಸಂಪಾದಿಸುವ ಕೀರ್ತಿಯು ಬಹುಕಾಲವಿರತಕ್ಕುದು ' ಎಂಬೀಮಾತುಗಳಿಂದ ಪೃಥ್ವೀರಾಜನಿಗೆ ಪ್ರೋತ್ಸಾಹಪಡಿಸಿ ಕಳುಹಿಸಿದಳು. ಆತನು ಯುದ್ಧದಲ್ಲಿ ಗೆದ್ದು, ಹಗೆಗಳನ್ನು ಓಡಿಸಿ, ಜಯಶಾಲಿಯಾಗಿ ಬಂದನು.

ಸೋತುಹೋದ ಮಹಮ್ಮದ್ ಘೋರಿಯು, ಎರಡು ವರ್ಷದ ಮೇಲೆ ಮತ್ತೆ ಬಂದಿಳಿದನು ಈ ಸಾರಿಯೂ ಪೃಥ್ವೀರಾಜನು ಯುದ್ಧಕ್ಕೆ ಸನ್ನದ್ಧನಾದನು ನಾನಾ ದೇಶಗಳಿಂದ ರಾಜರು ಸೇನಾಸಮೇತರಾಗಿ ಬಂದರು. ಪೃಥ್ವೀರಾಜನ

ಮಿತ್ರನಾದ ಸಮರಸಿಂಹನೇ ಮುಂದಾಳಾಗಿ ಬಂದು ನಿಂತನು. ಜಯಚಂದ್ರನು, ಅವನ ಮಿತ್ರರು ಕೆಲವರು ಮಾತ್ರ, ತಮ್ಮ ದೇಶವನ್ನು ಕಾಪಾಡಲಿಕ್ಕೆ ಬರಲಿಲ್ಲ. ಇವರು ಮಹಾಪಾಪಿಗಳೆಂದು ಈಗಲೂ ಹೇಳುತ್ತಿರುವರು

ಯುದ್ಧಕ್ಕೆ ಸನ್ನದ್ಧನಾದ ಪೃಥ್ವೀರಾಜನನ್ನು ಸಂಯುಕ್ತೆಯು ಉಡುಗೆ ತೊಡುಗೆಗಳಿಂದ ಅಲಂಕರಿಸಿದಳು. ಆಗ ಸಂಯುಕ್ತೆಯ ಮನಸ್ಸಿಗೆ, ತನ್ನ ಪತಿಯು ರಣರಂಗದಿಂದ ಹಿಂದಿರುಗಿ ಬರುವುದಿಲ್ಲವೆಂಬ ಹೆದರಿಕೆಯೊಂದು ಹುಟ್ಟಿತು. ಸಂಯುಕ್ತೆ ರೆಪ್ಪೆ ಬಡಿಯದೆ ಪೃಥ್ವೀರಾಜನ ಮುಖವನ್ನು ನೋಡಿದಳು ಯುದ್ಧಕ್ಕೆ ಹೋಗುವ ಆತುರದಲ್ಲಿ ರಾಜನು ಹೊರಟನು. ಪತಿಯು ಹೋಗುತ್ತಿದ್ದುದನ್ನು ಸಂಯುಕ್ತೆ ನೋಡಿ, 'ಇನ್ನು ಇಲ್ಲಿ ಪುನಃ ನನಗೆ ಪತಿಯ ಸಂದರ್ಶನವಾಗುವಂತಿಲ್ಲ. ಸ್ವರ್ಗದಲ್ಲಿಯೆ ಪತಿಯನ್ನು ನೋಡಬೇಕಾದೀತು' ಎಂದು ತನಗೆ ತಾನೇ ಹೇಳಿಕೊಂಡು ನಿಟ್ಟುಸಿರುಬಿಟ್ಟಳು ರಾಜಪುತ್ರಿಯರಿಗೆ ಯಶಸ್ಸಿನ ಮೇಲೆ ಮನಸ್ಸು ಇದ್ದಿತೇ ಹೊರತು ಯುದ್ಧದಲ್ಲಿ ಸೋತುಬಂದ ಅಣ್ಣ ತಮ್ಮಂದಿರ ಮತ್ತು ಪತಿ ಪುತ್ರರ ಮೇಲೆ ಮಮತೆ ಇರಲಿಲ್ಲ ಅವರು ಸೋತು ಬರುವುದಕ್ಕಿಂತ ಅಲ್ಲೇ ಸಾಯುವುದು ಲೇಸೆಂದು ತಿಳಿಯುತ್ತಿದ್ದರು

ಹಿಂದೆ ಯುದ್ಧವು ನಡೆದ ಸ್ಥಳದಲ್ಲಿಯೇ ಘೋರವಾದ ಒಂದು ಯುದ್ಧವು ನಡೆಯಿತು ಯುದ್ಧದಲ್ಲಿ ಪೃಥ್ವೀರಾಜನು ಹತನಾದನು ಈ ವರ್ತಮಾನವನ್ನು ಸಂಯುಕ್ತೆಯು ಕೇಳಿದೊಡನೆ ಚಿತೆಯನ್ನು ಸಿದ್ಧಪಡಿಸಿದಳು ತನ್ನ ವಸ್ತ್ರಾಭರಣಗಳನ್ನೆಲ್ಲ ಬೀಸಾಡಿ, ಕೆಂಪು ಬಟ್ಟೆಯನ್ನುಟ್ಟು, ಕೆಂಪು ಹೂವನ್ನು ಮುಡಿದು, ಪತಿಯನ್ನು ಹೃದಯದಲ್ಲಿ ಧ್ಯಾನಿಸುತ್ತ ಅಗ್ನಿಪ್ರವೇಶಮಾಡಿದಳು ನಿಮಿಷಮಾತ್ರದಲ್ಲಿ ಆ ಸುಕುಮಾರಿಯ ಶರೀರವು ಸುಟ್ಟು ಬೂದಿಯಾಯಿತು

---

## ೨೫. ಸ್ವಾಮಿಭಕ್ತಿ

ಇಂಗ್ಲೆಂಡ್ ದೇಶವನ್ನು ರಿಚರ್ಡ್ ಎಂಬ ದೊರೆಯು ಆಳುತ್ತಿದ್ದನು. ಇವನು ಬಹು ಶೂರನು, ಅತ್ಯಂತ ಬಲಶಾಲಿ, ಒಂದೇ ಏಟಿನಲ್ಲಿ ಕಬ್ಬಿಣದ ಒಂದು ಗಡಾರಿಯನ್ನು ಎರಡು ತುಂಡು ಮಾಡುತಿದ್ದನಂತೆ ಇವನ ಸಾಮರ್ಥ್ಯವನ್ನು ಇವನ ಸಮಾನ ಶತ್ರುವಾದ ಸುಲ್ತಾನ್ ಸಲಾದೀನನು ಸಹ ಮೆಚ್ಚಿದ್ದನು

ರಿಚರ್ಡ್ ಸಲಾದೀನನ ಮೇಲೆ ದಂಡೆತ್ತಿ ಹೋಗಿದ್ದಾಗ ಒಂದು ದಿನ ಕೆಲವರೊಡನೆ ಬೇಟೆಯಾಡುವುದಕ್ಕೆ ಹೋಗಿದ್ದನು ಅಲ್ಲಿ ಮುಸಲ್ಮಾನರು ಇವರ ಮೇಲೆ ಬಿದ್ದು, ಕೆಲವರನ್ನು ಕೊಂದು, ಕೆಲವರನ್ನು ಬಡಿದಟ್ಟಿ ಕೊನೆಗೆ ರಿಚರ್ಡ್‌ನನ್ನೇ ಸೆರೆ ಹಿಡಿವುದರಲ್ಲಿದ್ದರು ಆಗ ಇವನೊಡನೆ ಇದ್ದ ಒಬ್ಬ ಶೂರನು, ತಾನೆ ದೊರೆ ರಿಚರ್ಡ್, ಎಂದು ಹೇಳಿಕೊಂಡು, ಅವರ ಕೈಗೆ ವಶವಾದನು. ನಿಜವಾಗಿಯೂ ದೊರೆಯೇ ಸಿಕ್ಕಿದನೆಂಬ ಸಂತೋಷದಿಂದ ಅವರು ಅವನನ್ನು ಹಿಡಿದುಕೊಂಡುಹೋದರು

ರಿಚರ್ಡ್ಡನು, ಆ ಶೂರನ ಸ್ನೇಹಕ್ಕೂ, ಧೈರ್ಯಕ್ಕೂ ಸ್ವಾಮಿಭಕ್ತಿಗೂ ಮೆಚ್ಚಿ, ಅವನ ಸೆರೆಯನ್ನು ಬಿಡಿಸಲು, ತನ್ನ ಸೆರೆಯಲ್ಲಿದ್ದ ಸಲಾದೀನನ ಕಡೆಯವರಾದ ಹತ್ತು ಮಂದಿ ದೊಡ್ಡ ಮನುಷ್ಯರನ್ನು ಬಿಟ್ಟುಕೊಟ್ಟು, ಆ ಶೂರನನ್ನು ಮರ್ಯಾದೆಯಿಂದ ತನ್ನ ಬಿಡಾರಕ್ಕೆ ಕರೆತಂದನು.

---

## ೨೬. ಕಾಡುಹಂದಿಯ ವಿವೇಕ

ದೊಡ್ಡದಾದ ಒಂದು ಕಾಡಿನಲ್ಲಿ ಒಂದು ಕಾಡುಹಂದಿಯು ತನ್ನ ಕೋರೆ ದಾಡೆಗಳನ್ನು ಒಂದು ಮರಕ್ಕೆ ಹಾಕಿ ಮಸೆಯುತಿದ್ದಿತು. ಆ ಮಾರ್ಗವಾಗಿ ಒಂದು ನರಿಯು ಬಂದಿತು ಕೋರೆ ದಾಡೆಗಳನ್ನು ಮಸೆಯುತ್ತಿದ್ದ ಕಾಡು ಹಂದಿಯನ್ನು ಆ ನರಿಯು ನೋಡಿ, ಇದೇನು ! ನೀನು ನಿನ್ನ ಕೋರೆದಾಡೆಗಳನ್ನು ಮಸೆಯುವಂತಿದೆ ? ಕಾಡಿನಲ್ಲಿ ಬೇಟೆಗಾರರು ಬರುತಿರುವ ಗಲಭೆಯೂ ಇಲ್ಲ, ಬೇಟೆ ನಾಯಿಯ ಸುಳಿವೂ ಇಲ್ಲವಲ್ಲ ! ' ಎಂದಿತು

ಕಾಡು ಹಂದಿಯು ಅದಕ್ಕೆ-ಚೆನ್ನಾಗಿ ಹೇಳಿದೆ ! ನರಿರಾಜನೆ ! ಚೆನ್ನಾಯಿತು ಏನು ? ನನ್ನ ಆಯುಧಗಳನ್ನು ಉಪಯೋಗಿಸುವ ಕಾಲದಲ್ಲಿ ನಾನು ಅವುಗಳನ್ನು ಮಸೆದು ಹರಿತ ಮಾಡುವುದಕ್ಕೆ ಆಗುವುದೆ ? ಇದು ನನ್ನಿಂದ ಎಂದಿಗೂ ಆಗತಕ್ಕುದಲ್ಲ ಯಾವಾಗಲೂ ಮುಂದಾಗಿಯೇ ಸಿದ್ಧನಾಗಿರುವುದೇ ನನ್ನ ಪದ್ಧತಿ ' ಎಂದು ಉತ್ತರವನ್ನು ಕೊಟ್ಟಿತು

---

## ೨೭ ಕುದುರೆಯ ಸ್ವಭಾವ

ಕುದುರೆಗೆ ಹುಲಿಯನ್ನಾಗಲಿ ಚಿರತೆಯನ್ನಾಗಲಿ ಕಂಡರೆ ಸ್ವಭಾವವಾಗಿ ಹೆದರಿಕೆ ಇರುವುದು. ಕಾಡಿನಲ್ಲಿ ಹೋಗುತ್ತಿರುವಾಗ ಸಮೀಪದಲ್ಲಿ ಎಲ್ಲಾದರೂ ಹುಲಿ ಇದ್ದರೆ, ವಾಸನೆಯಿಂದಲೆ ಅದರ ಇರುವಿಕೆಯನ್ನು ತಿಳಿದು ಕುದುರೆಯು ಆ ಮಾರ್ಗವಾಗಿ ಹೋಗುವುದಕ್ಕೆ ಹಿಂದೆಗೆವುದು. ಆದರೆ ತನ್ನ ಮೇಲೆ ಕುಳಿತಿರುವ ಯಜಮಾನನಲ್ಲಿ ತನಗೆ ನಂಬಿಕೆಯಿದ್ದರೆ ಧೈರ್ಯವಾಗಿ ಹುಲಿಯಿರುವ ಕಡೆಗೆ ನುಗ್ಗುವುದೆಂದು ಬೇಟೆಗಾರರು ಹೇಳುವರು. ಒಂದು ಕುದುರೆಯು ಯಜಮಾನನಲ್ಲಿ ನಂಬಿಕೆಯಿಟ್ಟು ಸ್ವಲ್ಪವೂ ಹಿಂದೆಗೆಯದೆ ಹುಲಿಯಿದ್ದ ಕಡೆ ನುಗ್ಗಿದುದನ್ನು ಅನೇಕರು ಕಣ್ಣಾರೆ ನೋಡಿದರು

ಕಲ್ಕತ್ತಾ ಪಟ್ಟಣದಲ್ಲಿ ಮೃಗಗಳನ್ನು ಇಟ್ಟಿರುವ ಒಂದು ಭಾಗದಲ್ಲಿ ಒಂದು ದಿನ ಬಹು ಜನರು ಸೇರಿದ್ದರು ಅಲ್ಲಿ ಬೋನಿನಲ್ಲಿಟ್ಟಿದ್ದ ಒಂದು ಹುಲಿಯು ಹೇಗೋ ತಪ್ಪಿಸಿಕೊಂಡು, ಆ ಜನರ ಗುಂಪಿದ್ದ ಕಡೆಗೆ ನುಗ್ಗಿತು. ಜನರು ' ಹುಲಿ ಹುಲಿ ' ಎಂದು ಕೂಗುತ್ತ ದಿಗಿಲುಬಿದ್ದು ಚೆಲ್ಲಾಪಿಲ್ಲಿಯಾದರು. ಅಲ್ಲಿ ಅರಬ್ಬಿಯ

ಕುದುರೆಯನ್ನೇರಿ ನೋಡುತ್ತಿದ್ದ ಒಬ್ಬ ಇಂಗ್ಲೀಷ್ ಸರದಾರನು, ಬೋನನ್ನು ಗುಡಿಸುತ್ತಿದ್ದವನ ಕಯ್ಯಲ್ಲಿದ್ದ ಈಟಿಯನ್ನು ಕಿತ್ತುಕೊಂಡು, ಹುಲಿಯು ಹೋಗುತ್ತಿದ್ದ ಕಡೆಗೆ ಕುದುರೆಯನ್ನು ಬಿಟ್ಟನು. ಹುಲಿಯು ಇವನ ಮೇಲೆ ಹಾರುವುದಕ್ಕೆ ಸಿದ್ಧವಾಯಿತು. ಸರದಾರನು ಕುದುರೆಯನ್ನು ಹಾರಿಸಿ ಹುಲಿಯ ಬೆನ್ನಿನ ಮಧ್ಯೇ ಸರಿಯಾಗಿ, ಈಟಿಯಿಂದ ಚುಚ್ಚಿ ಅದನ್ನು ಕೊಂದುಬಿಟ್ಟನು. ಇದಲ್ಲವೆ ಧೈರ್ಯವೆಂಬುದು !

---

## ೨೮. ಹಾಗಲವಾಡಿ ಎಮ್ಮೆಯ ಕಥೆ

ಅರಸೀಕೆರೆಯೆಂದು ಒಂದು ಊರು ಆ ಊರಲ್ಲಿ ಅರ್ಕೇಶ್ವರ ಭಟ್ಟನೆಂಬ ಒಬ್ಬ ಬ್ರಾಹ್ಮಣನಿದ್ದನು. ಆ ಬ್ರಾಹ್ಮಣನು ಒಂದು ದಿನ ತನ್ನ ಹೆಂಡತಿಯೊಡನೆ ಮಾತನಾಡುತ್ತ, ಎಲೆ, ಎಲೆ, ನಮ್ಮ ಮನೆಯಲ್ಲಿ ಒಂದು ಎಮ್ಮೆ ಕಟ್ಟಬೇಕೆಂದು ಬಹಳ ಆಶೆ ಇದೆ ನಾಳೆ ಹಾಗಲವಾಡಿ ಸಂತೆಗೆ ಹೋಗಬೇಕೆಂದು ಇದ್ದೇನೆ. ನಾನು ಹಾಗಲವಾಡಿಗೆ ಹೋದರೆ ಗೀದರೆ ಹಾಗದ ಕಾಸಿಗೆ ಒಂದು ಎಮ್ಮೆ ತಂದರೆ ಗಿಂದರೆ ಅದು ಒಂದು ತಪ್ಪಲೆ ಹಾಲು ಕೊಟ್ಟರೆ ಗಿಟ್ಟರೆ-ಎಲೆ ! ಭದ್ರ-ಈಗಲೆ ಹೇಳುತ್ತೇನೆ, ಕೇಳು, ನಿಮ್ಮ ತಾಯಿಯ ಮನೆಗೆ ಮಜ್ಜಿಗೆ ಕೊಟ್ಟುಗಿಟ್ಟೀಯಾ-ಆ ! ' ಎಂದನು

ಆಗ ಅವಳು-ಚೆನ್ನಾಗಿ ಹೇಳಿದಿರಿ, ನಾನು ಮಜ್ಜಿಗೆ ಕೊಡದೆ ಬಿಟ್ಟೇನೆ-ಎಂದಳು ಈ ಭಟ್ಟನಿಗೆ ಕೋಪಬಂದು ' ಕೊಟ್ಟುಗಿಟ್ಟೀಯಾ, ಎಂದರೆ ' ಎಂದು ಫಟ್ಟನೆ ಅವಳ ಕಪಾಳಕ್ಕೆ ಒಂದು ಏಟು ಕೊಟ್ಟು, ' ಕೊಡದೆ ಬಿಟ್ಟೇನೇ ಎನ್ನುತ್ತೀಯಾ, ಹಾ ! ' ಎಂದು ಇನ್ನೊಂದು ಏಟು ಕೊಡುವುದಕ್ಕೆ ಕೈಯೆತ್ತಿದ್ದನು.

ಅವಳು ಅಳುತ್ತ ತಮ್ಮ ತಾಯಿ ಮನೆಗೆ ಹೋಗಿ ಗಂಡನು ಹೊಡೆದನೆಂದು ಅಲ್ಲಿ ತನ್ನಣ್ಣನೊಡನೆ ನಡೆದುದನ್ನೆಲ್ಲ ಹೇಳಿದಳು. ಅವಳ ಅಣ್ಣನು ಭರಭರನೆ ಬಂದು ಆ ಭಟ್ಟನಿಗೆ ಬಿಮ್ಮನೆ ನಾಲ್ಕು ಏಟು ಸೆಳೆದನು. ಭಟ್ಟನು ಕಕಬಿಕಿಯಾಗಿ ' ಇದೇಕೆ ನನ್ನನ್ನು ಹೊಡೆಯುವುದು ? ' ಎಂದನು ಅದಕ್ಕೆ ಭಾವ ಮೈದನು, ' ನಿನ್ನ ಎಮ್ಮೆಯು ಬಂದು, ನಮ್ಮ ತುಂಬೆ ಹೊಲವನ್ನೆಲ್ಲ ಮೇದು ಹೋಯಿತಲ್ಲ ' ಎಂದು ಹೇಳಿದನು. ಆಗ ಬ್ರಾಹ್ಮಣನು, ನಾನು ಇನ್ನೂ ಎಮ್ಮೆಯನ್ನು ತಂದೇ ಇಲ್ಲವಲ್ಲ, ಎನ್ನಲು, ಮೈದುನನು ' ನನ್ನ ತಂಗಿಯು, ಮಜ್ಜಿಗೆ ಕೊಟ್ಟೇ ಇಲ್ಲವಲ್ಲ, ಎಂದು ಉತ್ತರವನ್ನು ಕೊಟ್ಟನು. ಭಟ್ಟನು ಸುಮ್ಮನಾದನು.

---

## ೨೯. ಕೊಕ್ಕರೆಯ ಆಶೆ

ಒಂದು ತೋಳದ ಗಂಟಲಲ್ಲಿ ಒಂದು ಮೂಳೆಯು ಸಿಕ್ಕಿಕೊಂಡಿತು ಅದರಿಂದ ತೋಳಕ್ಕೆ ಬಹು ಹಿಂಸೆಯಾಗಿ, ನಿಂತಲ್ಲಿ ನಿಲ್ಲಲಾರದೆ ' ಹೋ ' ಎಂದು ಅರಚಿ

ಕೊಳ್ಳುತ್ತಿದ್ದಿತು. ಅಲ್ಲಿಯೇ ಹೋಗುತ್ತಿದ್ದ ಒಂದು ಕೊಕ್ಕರೆಯು ಇದನ್ನು ಕೇಳಿ ಮೆಲ್ಲನೆ ತೋಳದ ಹತ್ತಿರಕ್ಕೆ ಬಂದಿತು. ಆಗ ತೋಳವು ' ಅಯ್ಯೋ ! ನನ್ನ ಗಂಟಲಲ್ಲಿ ಸಿಕ್ಕಿರುವ ಮೂಳೆಯನ್ನು ನೀನಾದರೂ ತೆಗೆದರೆ ನಿನಗೆ ಬೇಕಾದುದನ್ನು ಕೊಡುವೆನು ' ಎಂದು ಕೊಕ್ಕರೆಯು ಕೇಳುವ ಹಾಗೆ ಹೇಳಿತು.

ಕೊಕ್ಕರೆಯು ತೋಳದ ಮಾತಿಗೆ ಆಶೆಬಿದ್ದು ತನ್ನ ಉದ್ದವಾದ ಕುತ್ತಿಗೆಯನ್ನು ಅದರ ಬಾಯಿಯಲ್ಲಿ ಹಾಕಿ, ತನ್ನ ಕೊಕ್ಕಿನಿಂದ ಮೂಳೆಯನ್ನು ಹಿಡಿದು ಹೊರಕ್ಕೆ ಎಳೆದುಹಾಕಿತು ತೋಳವು, ತಲೆಯನ್ನು ಒದರಿಕೊಂಡು ಬಾಯಿಯನ್ನು ಆಡಿಸುತ್ತ, ನಾಲಗೆಯನ್ನು ಹೊರಮಾಡಿಕೊಂಡು ಓಡತೊಡಗಿತು

ಆಗ ಕೊಕ್ಕರೆಯು ಸ್ವಲ್ಪ ಹೆದರಿಕೆಯಿಂದ ದೂರದಲ್ಲಿ ನಿಂತು—' ಬೇಕಾದುದನ್ನು ಕೊಡುವೆನು ' ಎಂದು ನೀನು ಹೇಳಿದೆಯಷ್ಟೆ, ಈಗ ಏನೂ ನನಗೆ ಕೊಡದೆ ಹೋಗುವಂತಿದೆ '—ಎಂದಿತು ಅದಕ್ಕೆ ತೋಳವು ಮುಖವನ್ನು ಸಿಡುಕಿಸಿಕೊಂಡು ' ಪಾಪಿ, ನನ್ನ ಬಾಯಿಯಲ್ಲಿ ತಲೆಯನ್ನು ಇಟ್ಟು ಬದುಕಿ ಬಂದುದು ಸಾಲದೋ ? ನಿನಗೆ ಇನ್ನು ಏನು ಆಗಬೇಕು ? ಸಾಕು, ಸಾಕು, ಹೋಗು ' ಎಂದು ಗದರಿಸಿತು

---

## ೩೦ ಕುದುರೆಯ ಕಳ್ಳ

ಒಂದು ಊರಿನಲ್ಲಿ ಒಬ್ಬ ಕಳ್ಳನು ಕುದುರೆಗಳನ್ನೇ ಕದ್ದು ಮಾರಿ ಜೀವಿಸುತ್ತಿದ್ದನು ಅವನು ಒಂದು ರಾತ್ರಿ ಒಬ್ಬ ಸಾಹುಕಾರನ ಮನೆಯ ಗೋಡೆಯನ್ನು ದುಮಿಕಿ ಲಾಯದಲ್ಲಿದ್ದ ಕುದುರೆಯನ್ನು ಕದ್ದುಕೊಂಡು ಹೋದನು. ಲಾಯದಲ್ಲಿ ಕುದುರೆಯು ಇಲ್ಲದಿರುವುದನ್ನು ನೋಡಿ, ಸಾಹುಕಾರನು ಊರಲ್ಲೆಲ್ಲ ಹುಡುಕಿದನು. ಕುದುರೆಯು ಊರಲ್ಲಿ ಸಿಕ್ಕಲಿಲ್ಲ. ಆದುದರಿಂದ, ನೆರೆಯ ಊರಿನಲ್ಲಿ ನಡೆಯುತ್ತಿದ್ದ ದನ ಕರುಗಳ ಸಂತೆಗೆ ತಾನೇ ಹೋದನು.

ಅಲ್ಲಿ ತನ್ನ ಕುದುರೆಯು ಇದ್ದುದನ್ನು ನೋಡಿದನು ಆಗ ಆ ಕುದುರೆಯನ್ನು ಮಾರುವುದಕ್ಕೆ ತಂದಿದ್ದವರೊಡನೆ ಕೊಂಡುಕೊಳ್ಳುವನಂತೆ ಮಾತನಾಡಿದನು. ಅಷ್ಟರಲ್ಲಿ ಅಲ್ಲಿಗೆ ಇನ್ನೂ ಕೆಲವರು ಬಂದರು. ಆಗ ಸಾಹುಕಾರನು, ' ಈ ಕುದುರೆಯು ನನ್ನದು ಇವನು ಕದ್ದು ತಂದಿರುತ್ತಾನೆ ' ಎಂದನು ಕಳ್ಳನು ತನ್ನದು ಕುದುರೆ ಎಂದು ಹೇಳಿದನು. ಇಬ್ಬರಿಗೂ ಜಗಳ ಬಿದ್ದಿತು.

ಆಗ ಸಾಹುಕಾರನು ತಟ್ಟನೆ ಕುದರೆಯ ಎರಡು ಕಣ್ಣುಗಳನ್ನೂ ಮುಚ್ಚಿ ಕಳ್ಳನನ್ನು ಕುರಿತು, ' ಕುದುರೆಯು ನಿನ್ನದಾದರೆ, ಕುದುರೆಗೆ ಯಾವ ಕಣ್ಣು ಕುರುಡು ಬೇಗ ಹೇಳು,' ಎಂದು ಕೇಳಿದನು ಕಳ್ಳನು, ಅನುಮಾನಿಸಿದರೆ, ಕೆಲಸವು ಕೆಡುವುದೆಂದು, ಬೇಗನೆ ' ಬಲಗಣ್ಣು ಕುರುಡು ' ಎಂದನು. ಅದಕ್ಕೆ ಸಾಹುಕಾರನು ' ಬಲಗಣ್ಣಲ್ಲ. ಚೆನ್ನಾಗಿ ಆಲೋಚಿಸಿ ಹೇಳು ' ಎನ್ನಲು, ಕಳ್ಳನು, ಎಡಗಣ್ಣು ಇರಬಹುದೆಂದಾಲೋಚಿಸಿ ' ಬಲಗಣ್ಣು ಅಲ್ಲ, ನಿಜ, ನಾನು ಗಾಬರಿ

ಯಲ್ಲಿ ಹೇಳಿದೆನು. ಎಡಗಣ್ಣು ಕುರುಡು, ಎಡಗಣ್ಣು ' ಎಂದನು. ಆಗ ಸಾಹು ಕಾರನು, ತನ್ನ ಕೈಯನ್ನು ತೆಗೆಯಲು ಕುದುರೆಯು ಫಳಫಳನೆ ಎರಡು ಕಣ್ಣುಗಳನ್ನೂ ಬಿಟ್ಟಿತು. ಅಲ್ಲಿದ್ದವರೆಲ್ಲರೂ ಕುದುರೆಗಳ್ಳನನ್ನು ಹಿಡಿದು ಶಿಕ್ಷೆಗೆ ಗುರಿಮಾಡಿದರು.

---

## ೩೧ ಪದ್ಮಿನಿ—(೧)

ಪದ್ಮಿನಿಯು ಚಿತ್ತೂರು ರಾಜ್ಯವನ್ನು ಪಾಲಿಸುತ್ತಿದ್ದ ಭೀಮಸಿಂಹನ ಹೆಂಡತಿಯು ರೂಪಿನಲ್ಲಿಯೂ ಗುಣದಲ್ಲಿಯೂ ಇವಳಿಗೆ ಸಮಾನರಾದವರು ಆ ಕಾಲದಲ್ಲಿ ಯಾರೂ ಇರಲಿಲ್ಲ. ಆಗ ದೆಹಲಿಯನ್ನು ಆಳುತ್ತಿದ್ದ ಮುಸಲ್ಮಾನ ದೊರೆಯಾದ ಅಲ್ಲಾವುದೀನನು ಈ ವರ್ತಮಾನವನ್ನು ಕೇಳಿ ದೊಡ್ಡ ಸೇನೆಯೊಡ ಗೂಡಿ ರಾಣಿ ಪದ್ಮಿನಿಯನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು, ಚಿತ್ತೂರನ್ನು ಮುತ್ತಿಗೆ ಹಾಕಿದನು ಪದ್ಮಿನಿಯನ್ನು ಕರೆತಂದು ತನಗೆ ಒಪ್ಪಿಸಿದಲ್ಲದೆ ಚಿತ್ತೂರ ಮುತ್ತಿಗೆಯನ್ನು ತೆಗೆದುಹೋಗುವುದಿಲ್ಲವೆಂದು ಅಲ್ಲಾವುದೀನನು ಹಟಹಿಡಿದನು. ಅವನ ಹಟವು ಸಾಗಲಿಲ್ಲ

ಕಡೆಗೆ ಪದ್ಮಿನಿಯನ್ನು ಕಣ್ಣಿನಿಂದ ನೋಡಿಯಾದರೂ ಹೊರಟು ಹೋಗುವೆ ನೆಂದು ಅಲ್ಲಾವುದೀನನು ಹೇಳಿ ಕಳುಹಿಸಿದನು ಕನ್ನಡಿಯಲ್ಲಿ ಅವಳ ಮುಖವನ್ನು ನೋಡಬಹುದೆಂದು ರಾಜಪುತ್ರರು ತಿಳಿಸಿದರು ಸುಲ್ತಾನನು ಅದಕ್ಕೂ ಒಪ್ಪಿದನು ಒಂದು ದಿವಸ ಕೆಲವು ಮಂದಿಯನ್ನು ಮೈಗಾವಲಿಗೆ ಕರೆದುಕೊಂಡು ಅಲ್ಲಾವುದೀ ನನು ಭೀಮಸಿಂಹನ ಅರಮನೆಗೆ ಬಂದನು ಅಲ್ಲಿ ಪದ್ಮಿನಿಯ ಪ್ರತಿಬಿಂಬವನ್ನು ಕನ್ನಡಿಯಲ್ಲಿ ನೋಡಿ ಏನಾದರೂ ಉಪಾಯಮಾಡಿ ಪದ್ಮಿನಿಯನ್ನು ಸಾಗಿಸಿಕೊಂಡು ಹೋಗಬೇಕೆಂದು ಮನಸ್ಸಿನಲ್ಲೆ ಗೊತ್ತುಮಾಡಿಕೊಂಡು ಹಿಂದುರಿಗಿದನು.

ಅಲ್ಲಾವುದೀನನನ್ನು ಸಾಗಕಳುಹಿಸುವುದಕ್ಕಾಗಿ, ಭೀಮಸಿಂಹನೂ ಜತೆಯ ಲ್ಲಿಯೇ ಹೊರಟನು. ಉಪಾಯದಿಂದ ಅಲ್ಲಾವುದೀನನು ಭೀಮಸಿಂಹನನ್ನು ಕೋಟೆ ಯಿಂದ ಹೊರಕ್ಕೆ ಕರೆದುಕೊಂಡು ಬಂದನು ಅಲ್ಲಿ ತುರುಕರು ಕಾದಿದ್ದು ಭೀಮ ಸಿಂಹನನ್ನು ಸೆರೆಹಿಡಿದು ಸುಲ್ತಾನನ ಪಾಳೆಯಕ್ಕೆ ಕರೆದುಕೊಂಡು ಹೋದರು. ಆಗ ಮೋಸಗಾರನಾದ ಅಲ್ಲಾವುದೀನನು ಪದ್ಮಿನಿಯನ್ನು ತನ್ನ ಬಿಡಾರಕ್ಕೆ ಕಳುಹಿಸಿ ಕೊಟ್ಟಲ್ಲದೆ ಭೀಮಸಿಂಹನನ್ನು ಬಿಡೆನೆಂದನು ಪದ್ಮಿನಿಗೆ ಬಹು ದುಃಖವುಂಟಾಯಿತು.

---

## ೩೨. ಪದ್ಮಿನಿ—(೨)

ಪದ್ಮಿನಿಯು, ಆ ದುಷ್ಟನಾದ ಅಲ್ಲಾವುದೀನನ ಬಿಡಾರಕ್ಕೆ ಹೋದರೆ, ಅವಳ ಸತೀತ್ವವು ಕೆಟ್ಟುಹೋಗುವುದು ಹೋಗದಿದ್ದರೆ ಪತಿಯು, ಅಲ್ಲಾವುದೀನನ ಸೆರೆ ಯಲ್ಲಿ ಸಿಕ್ಕಿ ಸಾಯುವವರೆಗೂ ಸಂಕಟಪಡುವನು ಏನು ಮಾಡಬೇಕು ! ಪದ್ಮಿ

ನಿಯು ಬಹಳವಾಗಿ ಚಿಂತಿಸುತ್ತಿದ್ದಳು. ಅಷ್ಟರಲ್ಲಿ ರಾಜಪುತ್ರರೆಲ್ಲರೂ, ಪದ್ಮಿನಿಯ ಮಾನಸಂರಕ್ಷಣೆಗೂ, ಭೀಮಸಿಂಹನ ಬಿಡುಗಡೆಗೂ ಸಿದ್ಧರಾದರು. ಇವರಲ್ಲಿ, ಹನ್ನೆರಡು ವಯಸ್ಸಿನ ಬಾದಳನೆಂಬ ಒಬ್ಬ ಪರಾಕ್ರಮಶಾಲಿಯಾದ ಬಾಲಕನೂ ಸೇರಿದ್ದನು

ಅಲ್ಲಾವುದೀನನು,—ಪದ್ಮಿನಿ ಈ ಹೊತ್ತು ಬರುವಳು-ಎಂದು, ಅವಳ ದಾರಿಯನ್ನೇ ಕಾದಿರುತ್ತಿದ್ದನು. ಆಗ ಪದ್ಮಿನಿಯು ಪತಿಯನ್ನು ಸೆರೆಯಿಂದ ಬಿಡಿಸಬೇಕಾದುದು ಅವಶ್ಯವಾದುದರಿಂದ ನಾನೇ ಬರಲು ಸಿದ್ಧಳಾಗಿರುವೆನು ನನ್ನೊಡನೆ ಬಹುಮಂದಿ ದಾಸಿಗಳೂ ಬರುವರು, ಎಂದು ಸುಲ್ತಾನ್ ಅಲ್ಲಾವುದೀನನಿಗೆ ಹೇಳಿ ಕಳುಹಿಸದಳು. ಅವನಿಗೆ ಬಹು ಸಂತೋಷವಾಯಿತು ಕೂಡಲೆ ಒಂದೊಂದಾಗಿ ಏಳುನೂರು ಪಲ್ಲಕ್ಕಿಗಳು ಬಂದು ಸುಲ್ತಾನನ ಬಿಡಾರದಲ್ಲಿ ಇಳಿದುವು. ಆ ಪಲ್ಲಕ್ಕಿಗಳೊಳಗೆ ಹೆಂಗಸರ ವೇಷವನ್ನು ಹಾಕಿಕೊಂಡು ಕುಳುತಿದ್ದ ಶೂರರಾದ ರಾಜಪುತ್ರರು ಸಮಯನೋಡಿ ಹೊರಗೆ ಬಂದರು ಬೋಯಿಗಳಂತೆ ಪಲ್ಲಕ್ಕಿಗಳನ್ನು ಹೊತ್ತುಕೊಂಡು ಬಂದಿದ್ದವರೂ ಚಿತ್ತೂರಿನ ವೀರರೇ!

ಸಮೀಪದಲ್ಲಿಯೇ ತುರುಕರ ಸೇನೆಯು ಇಳಿದಿದ್ದಿತು ರಾಜಪುತ್ರರಿಗೂ, ತುರುಕರಿಗೂ ಒಡನೆಯೇ ಭಯಂಕರವಾದ ಯುದ್ಧವು ನಡೆಯಿತು. ಆ ಯುದ್ಧದಲ್ಲಿ, ಬಾಲಕನಾದ ಆ ಬಾದಳನು ಮಹಾಪರಾಕ್ರಮವನ್ನು ತೋರಿಸಿದನು ಅವನ ಧೈರ್ಯಕ್ಕೂ ಶೌರ್ಯಕ್ಕೂ ತುರುಕರು ಬೆರಗಾದರು ಅವನು ಶತ್ರುಸೇನೆಯನ್ನು ಧ್ವಂಸಮಾಡಿಬಿಟ್ಟನು. ಕಳೆದುಳಿದ ತುರುಕರು ಓಡಿಹೋದರು ಭೀಮಸಿಂಹನಿಗೆ ಬಿಡುಗಡೆಯಾಯಿತು ಪದ್ಮಿನಿಯ ಮಾನವೂ ಉಳಿಯಿತು ಅಲ್ಲಾವುದೀನನ ಪೊಳ್ಳುಮಾತು ಹಾರಿತು ಬಾದಳನ ಶೌರ್ಯವು ಹೆಸರಾಯಿತು. ಪದ್ಮಿನೀ ಭೀಮಸಿಂಹರು ಬಹುಕಾಲ ಸುಖವಾಗಿದ್ದರು.

---

## ೩೩. ಆನೆಯ ಬುದ್ಧಿ

ಒಂದು ಪಟ್ಟಣದ ಹೊರಗೆ ಒಂದು ಆನೆಯ ಲಾಯವಿದ್ದಿತು. ಲಾಯಕ್ಕೂ ಊರಿಗೂ ಮಧ್ಯೇ, ದಾರಿಯಲ್ಲಿ ಒಂದು ಸಣ್ಣ ಸೇತುವೆಯುಂಟು ಆನೆಯು ಆ ಸೇತುವೆಯ ಮೇಲೆ ಹೋಗುವಾಗಲೆಲ್ಲ ಸೊಂಡಿಲಿನಿಂದ ಔಕಿ ಒಂದು ಕಾಲನ್ನು ಮೊದಲು ಊರಿ ಆ ಮೇಲೆ ಮುಂದೆ ಹೋಗುತ್ತಿದ್ದಿತು.

ಒಂದು ದಿನ ಆ ಸೇತುವೆಯ ಬಳಿಗೆ ಬಂದು ಒಂದು ಕಾಲನ್ನು ಊರಿನೋಡಿ ಎಂದಿನಂತೆ ಮುಂದೆ ಹೋಗದೆ ಹಿಮ್ಮೆಟ್ಟಿತು. ಮಾವತಿಗನು ಕಾರಣವನ್ನು ತಿಳಿಯದೆ ಭಲ್, ಭಲ್ಲೆಂದು, ಆನೆಯ ನೆತ್ತಿಯಲ್ಲಿ ಚುಚ್ಚಲು ಆನೆಯು ಸೊಂಡಿಲನ್ನು ಸುರುಳಿಮಾಡಿಕೊಂಡು ಮೇಲಕ್ಕೆ ಎತ್ತಿ ಕಿರುಚಿತಲ್ಲದೆ ಮುಂದೆ ಹೋಗಲಿಲ್ಲ.

ಮಾವತಿಗನು ಭಲ್, ಭಲ್ ಎನ್ನುತ್ತ ಬಿಡದೆ ಚುಚ್ಚಲು, ಆನೆಯು ನೋವು ತಡೆಯಲಾರದೆ ಮೆಲ್ಲನೆ ಹೊರಟಿತು. ಅರ್ಧ ಸೇತುವೆಗೆ ಬರುವಷ್ಟರಲ್ಲಿಯೇ ಸೇತುವೆಯು ಮುರಿಯಿತು ಆನೆಯು ಬಿದ್ದುಬಿಟ್ಟಿತು. ಮಾವತಿಗನೂ ಬಿದ್ದು ಸತ್ತನು. ಆನೆಗೆ ಬಹಳ ಪೆಟ್ಟಾಯಿತು ಆನೆಯ ಬುದ್ಧಿಯನ್ನು ತಿಳಿಯದ ಆ ಮಾವತಿಗನಿಗೆ ಎಂತಹ ಗತಿ ಬಂದಿತು !

---

## ೩೪. ದಯಾಳು

ಇಬ್ಬರು ಕಲ್ಲುಗೆಲಸದವರು ಇತರರೊಂದಿಗೆ ಕಾಲಾವದಿಯ ಮೇಲೆ ನಿಂತು ಒಂದು ದೊಡ್ಡ ಗೋಪುರದ ಕೆಲಸವನ್ನು ಮಾಡುತ್ತಿದ್ದರು. ಇದ್ದಹಾಗೆ ಆ ಕಾಲಾವದಿಯು ಮುರಿಯಲು ಕೆಲಸಗಾರರನೇಕರು ಬಿದ್ದು ಸತ್ತರು ಈ ಕಲ್ಲುಗೆಲಸದವರಿಬ್ಬರು ಮಾತ್ರ ಗೋಡೆಯೊಳಕ್ಕೆ ಸೇರಿದ್ದ ಒಂದು ಬೊಂಬನ್ನು ಬಲವಾಗಿ ಹಿಡಿದುಕೊಂಡರು ಇವರ ಭಾರಕ್ಕೆ ಅದೂ ಪಟ ಪಟ ಎಂದು ಮುರಿಯುತ್ತಿದ್ದಿತು.

ಆಗ ಅವರಿಬ್ಬರಲ್ಲಿ ಚಿಕ್ಕವನಾದವನು, ನಾವಿಬ್ಬರೂ ಇದನ್ನು ಹಿಡಿದುಕೊಂಡಿದ್ದರೆ ಇದೂ ಮುರಿದು ಬೀಳುವುದು ನಿಜ ನಾವೂ ಇತರರಂತೆ ಸಾಯುವೆವು. ನಾನಾದರೊ ಚಿಕ್ಕವನು, ಹೆಂಡತಿಯಿಲ್ಲ ಮಕ್ಕಳಿಲ್ಲ ಅವನಿಗಾದರೊ ಹೆಂಡತಿ ಮಕ್ಕಳು ಇರುವರು ಅವನು ಸತ್ತರೆ ಅಷ್ಟು ಜನರಿಗೆ ತೊಂದರೆಯಾಗುವುದು ಎಂದು ಭಾವಿಸಿ, ' ನೀನು ಸಂಸಾರಿ . ನೀನು ಬದುಕು, ' ಎಂದು ದೊಡ್ಡವನಿಗೆ ಹೇಳಿ ತಟ್ಟನೆ ತನ್ನ ಎರಡು ಕೈಗಳನ್ನೂ ಬಿಟ್ಟುಬಿಟ್ಟನು. ಕೂಡಲೆ ಅವನು ಅಲ್ಲಿಂದ ಕೆಳಗೆ ಬಿದ್ದು ಸತ್ತುಹೋದನು ಭಾರವು ಕಡಿಮೆಯಾದುದರಿಂದ ಆ ಬೊಂಬು ಮುರಿಯಲಿಲ್ಲ ಆ ಸಂಸಾರಿಯು ಬದುಕಿಕೊಂಡನು.

---

## ೩೫. ಮಹಾಶೂರ

ಒಂದು ದೊಡ್ಡ ಯುದ್ಧಕ್ಕೆ ಹೋಗಿದ್ದ ಒಬ್ಬನು, ಯುದ್ಧವು ಮುಗಿದಮೇಲೆ, ತನ್ನ ಊರಿಗೆ ಹಿಂದಿರುಗಿ ಬಂದನು ಅವನ ಊರು ಒಂದು ಹಳ್ಳಿ. ಆ ಹಳ್ಳಿಯಲ್ಲಿದ್ದ ಜನರೆಲ್ಲರೂ ಬಹು ಸಂತೋಷದಿಂದ ಇವನನ್ನು ಇದಿರುಗೊಂಡು ಮನೆಗೆ ಕರೆತಂದರು ಯುದ್ಧದಲ್ಲಿ ನಡೆದ ಸಮಾಚಾರವನ್ನೆಲ್ಲ ಕೇಳಬೇಕೆಂದು ಅವರೆಲ್ಲರೂ ಆತುರರಾಗಿದ್ದರು ಆಗ ಅವನು ' ನಾಳೆ ನೀವೆಲ್ಲರೂ ಭೋಜನಕ್ಕೆ ನಮ್ಮ ಮನೆಗೆ ಬನ್ನಿ. ಊಟವಾದ ಮೇಲೆ ನಿದಾನವಾಗಿ ಎಲ್ಲವನ್ನೂ ಹೇಳುತ್ತೇನೆ ' ಎಂದನು.

ಮರುದಿನ ಎಲ್ಲರೂ ಬಂದರು ಯುದ್ಧಕ್ಕೆ ಹೋಗಿ, ಇವನು ಹಿಂದಿರುಗಿ ಬಂದನೆಂಬ ಸಂತೋಷದಿಂದ ಮನೆಯವರು ಬೇಕಾದ ಅಡಿಗೆಮಾಡಿದ್ದರು ಜನರೆಲ್ಲರೂ ಊಟಮಾಡಿ ತೃಪ್ತಿಪಟ್ಟರು. ಊಟವಾದ ಮೇಲೆ ಇವನು ' ನನ್ನ ಸಾಹಸ

ವನ್ನು ಎಷ್ಟೆಂದು ಹೇಳಲಿ! ಒಬ್ಬ ಸೇನಾಧಿಪತಿಯ ಕಾಲನ್ನು ನಾನೇ ಕಡಿದುಹಾಕಿದೆನು, ಒಬ್ಬ ದೊರೆಮಗನ ಕೈ ಕತ್ತರಿಸಿದೆನು, ಒಬ್ಬನ ಹೊಟ್ಟೆಯನ್ನು ತಿವಿದೆನು ಇನ್ನೊಬ್ಬನ ತೊಡೆಯನ್ನು ಕಡಿದುಹಾಕಿದೆನು' ಎಂದು ಹೇಳಿಕೊಳ್ಳುತ್ತಿದ್ದನು ಎಲ್ಲರೂ ಇವನ ಪ್ರತಾಪವನ್ನು ಕೇಳಿ ದಿಗಿಲುಪಡುತ್ತಿದ್ದರು. ಆಗ ಇವನ ಹೆಂಡತಿಯು 'ಅದೇನು! ನೀವು ಯಾರ ತಲೆಯನ್ನೂ ಕಡಿದೆವೆಂದು ಹೇಳಲಿಲ್ಲ' ಎಂದಳು ಅದಕ್ಕೆ ಅವನು, 'ಎಲ್ಲರ ತಲೆಯನ್ನೂ ಮೊದಲೇ ಕಡಿದುಹಾಕಿದ್ದರು' ಎಂದನು

---

## ೩೬. ಬೆಕ್ಕಿನ ತಪಸ್ಸು

ಒಬ್ಬ ಒಕ್ಕಲಿಗನ ಮನೆಯಲ್ಲಿ ಬತ್ತದ ಕಣಜವೊಂದಿದ್ದಿತು ಅಲ್ಲಿ ನೂರಾರು ಹೆಗ್ಗಣಗಳೂ ಇಲಿಗಳೂ ಬತ್ತವನ್ನು ತಿಂದು ಸುಖವಾಗಿ ವಾಸಮಾಡಿಕೊಂಡಿದ್ದುವು ಚೆನ್ನಾಗಿ ತಿಂದು ಕೊಬ್ಬಿದ ಇಲಿ ಹೆಗ್ಗಣಗಳ ಕಾಟವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಆ ಒಕ್ಕಲಿಗನು ಒಂದು ಬೆಕ್ಕನ್ನು ಸಾಕಿದನು ಅದು ದಿನ ದಿನವೂ ಎರಡು ಮೂರು ಇಲಿಗಳನ್ನು ತಿಂದು ಹೆಗ್ಗಣಗಳನ್ನು ಬೆದರಸಿ ಓಡಿಸುವುದಕ್ಕೆ ಮೊದಲು ಮಾಡಿತು ಈಹೊತ್ತು ಇದ್ದ ಇಲಿ ನಾಳೆ ಇಲ್ಲ, ಹೀಗಾಗುತ್ತ ಬಂದಿತು

ಆಗ ಉಳಿದ ಇಲಿಗಳೂ ಗಡಬನಾದ ಹಗ್ಗಣಗಳೂ ಸೇರಿ ನಾವುಗಳು ಈ ಬೆಕ್ಕಿನ ಬಾಯಿಗೆ ತುತ್ತಾಗದಂತೆ ಏನಾದರೂ ಒಂದು ಉಪಾಯ ಮಾಡಬೇಕೆಂದಾಲೋಚಿಸಿ, ಒಂದು ಇಲಿಯೂ ಬಿಲದಿಂದ ಹೊರಕ್ಕೆ ಬರಕೂಡದೆಂದೂ ದೊಡ್ಡ ದೊಡ್ಡ ಹೆಗ್ಗಣಗಳು ಇಲಿಗಳಿಗೆ ತಿಂಡಿಯನ್ನು ಒದಗಿಸಿಕೊಡಬೇಕೆಂದೂ ಕಟ್ಟುಮಾಡಿಕೊಂಡುವು

ಎಂದಿನಂತೆ ಬೆಕ್ಕು ಬಂದು ನೆಲಕ್ಕೆ ಹತ್ತಿದಹಾಗೆ ತನ್ನ ನಾಲ್ಕು ಕಾಲುಗಳ ಮೇಲೆ ಕುಳಿತುಕೊಂಡು ಶಬ್ದವಾಗದಂತೆ ಬಾಲವನ್ನು ನೆಲದಮೇಲೆ ಬಡಿಯುತ್ತ ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಸ್ವಲ್ಪ ಶಬ್ದವಾದರೂ ಕೇಳುತ್ತ ಪಿಳಿಪಿಳಿ ಕಣ್ಣು ಬಿಟ್ಟುಕೊಂಡು ಸುತ್ತಮುತ್ತೂ ನೋಡುತ್ತ ಇಲಿ ಬಂದರೆ ಸಾಕೆಂದು ಮೇಲೆ ಬೀಳಲು ಹೊಂಚುಹಾಕುತ್ತಿದ್ದಿತು ಬೆಳಗಾಯಿತು ಮಧ್ಯಾಹ್ನವಾಯಿತು ಸಾಯಂಕಾಲವೂ ಆಯಿತು ಒಂದು ಇಲಿ ಸುಂಡವಾದರೂ ಅತ್ತಿತ್ತ ಸುಳಿಯಲಿಲ್ಲ ಬೆಕ್ಕಿಗೆ ಹಸಿವು ಹೆಚ್ಚಾಯಿತು. ಆಗ ಬೆಕ್ಕು ಇಲಿಗಳನ್ನು ಉಪಾಯದಿಂದ ಹತ್ತಿರ ಬರಮಾಡಿಕೊಳ್ಳಬೇಕೆಂದಾಲೋಚಿಸಿ ಗೋಡೆಯ ಮೇಲುಭಾಗದಲ್ಲಿ ಒಂದು ಗೂಟವಿರಲು ಅಲ್ಲಿಗೆ ಹಾರಿ ಹಿಂದಣ ಕಾಲುಗಳಿಂದ ಅದಕ್ಕೆ ನೇತುಹಾಕಿಕೊಂಡು ಮುಂದಣ ಕೈಗಳೆರಡನ್ನೂ ಜೋಡಿಸಿ ನೀಡಿ ಅರೆಗಣ್ಣು ಮುಚ್ಚಿಕೊಂಡು, ತಪಸ್ಸು ಮಾಡುವಂತೆ ಒಂದು ಗಳಿಗೆ ಸುಮ್ಮನೆ ಕಾಯಿತು

ಬೆಕ್ಕು ಸತ್ತಹಾಗೆ ಜೋತಾಡುತಿದ್ದುದನ್ನು ಇಲಿಗಳು ಬಿಲಗಳಿಂದ ಇಣಿಕಿ ನೋಡಿ ಸಂತೋಷದಿಂದ ಓಡಿಹೋಗಿ ದೊಡ್ಡ ದೊಡ್ಡ ಹೆಗ್ಗಣಗಳ ಮುಂದೆ 'ಬೆಕ್ಕು

ಹಸಿವಿನಿಂದ ಸತ್ತುಹೋದಹಾಗಿದೆ , ನಮಗೆ ಇನ್ನೇನೂ ಭಯವಿಲ್ಲ. ಎಂದಿನಂತೆ ಓಡಾಡಿಕೊಂಡಿರುವಂತೆ ನಮಗೆ ಅಪ್ಪಣೆಯನ್ನು ಕೊಡಿ ' ಎಂದು ಕೇಳಿಕೊಂಡುವು. ಆಗ ಒಂದು ಮುದಿ ಹೆಗ್ಗಣವು ' ತಾಳಿತಾಳಿ, ಬೆಕ್ಕಿನ ತಂತ್ರವು ನಿಮಗೆ ತಿಳಿಯದು. ನಾನು ಹೋಗಿ ನೋಡಿಕೊಂಡು ಬರುತ್ತೇನೆ ಆದುವರೆಗೂ ತಾಳಿ ಎಂದು ಹೇಳಿ ಹೋರಿನಿಂದ ಹೊರಕ್ಕೆ ಬಂದು ಕಪಟದ ಹಕ್ಕಿಯಂತೆ ನೇತಹಾಕಿಕೊಂಡಿದ್ದ ಆ ಬೆಕ್ಕನ್ನು ನೋಡಿ, ' ನಿನ್ನ ವೇಷವನ್ನು ನಾನು ಒಲ್ಲೆನು ತೆಗೆ, ತೆಗೆ ' ಎಂದಿತು

ಆಗ ಬೆಕ್ಕು ಸುಮ್ಮನಿರದೆ ' ಅಯ್ಯೊ ! ಮೂಷಕ ರಾಜನೆ ! ನಾನು ನಿನ್ನ ಕಡೆಯವರನ್ನು ಕೊಂದು ತಿಂದ ಪಾಪಕ್ಕೆ ನನಗೆ ಕಣ್ಣು ಕಾಣದಂತಾಯಿತು, ನನ್ನ ಪಂಜಗಳನ್ನು ಚೆನ್ನಾಗಿ ಬಿಡದಂತೆ ಆಯಿತು ದೇವರು ನನಗೆ ಹೀಗೆ ಮಾಡಿಬಿಟ್ಟನು. ಇನ್ನು ಮೇಲೆ ಯಾವ ಇಲಿಯನ್ನೂ ನಾನು ಮುಟ್ಟುವುದಿಲ್ಲವೆಂದು ದೇವರನ್ನು ಬೇಡಿಕೊಳ್ಳುತ್ತೇನೆ ನೀವೆಲ್ಲರೂ ಇನ್ನು ಮೇಲೆ ಧೈರ್ಯವಾಗಿ ಬರಬಹುದು ' ಎಂದಿತು. ಬುದ್ಧಿ ಇಲ್ಲದ ಆ ಹೆಗ್ಗಣವು ಬೆಕ್ಕಿನ ಕಣ್ಣು ಕೈಕಾಲುಗಳು ಹೋಗಿರುವುದು ಸುಳ್ಳೋ ನಿಜವೋ ಚೆನ್ನಾಗಿ ನೋಡಬೇಕೆಂದು ಮುಂದೆ ಬಂದು ಬೆಕ್ಕನ್ನು ದೃಷ್ಟಿಸಿ ನೋಡುತ್ತ ನಿಂತಿತು ಹಸಿದು ಕಾದಿದ್ದ ಆ ಬೆಕ್ಕು ತನ್ನ ಹಸಿವಿಗೆ ಸರಿಯಾಗಿ ತುಂಡು ಹೆಗ್ಗಣ ಸಿಕ್ಕಿತೆಂದು ಸಂತೋಷದಿಂದ ಫಕ್ಕನೆ ಅದರಮೇಲೆ ಬಿದ್ದು ಕತ್ತನ್ನು ಕಚ್ಚಿಕೊಂಡು ಚೆನ್ನಾಗಿ ಎರಡು ಮೂರುಸಾರಿ ಒದರಿ ಹೆಗ್ಗಣವನ್ನು ಎತ್ತಿಕೊಂಡು ಓಡಿತು ಬೆಕ್ಕಿನ ತಪಸ್ಸನ್ನು ನಂಬಬಹುದೆ !

---

## ೩೭ ರಾಜಕುಮಾರ ಹೆನ್ರಿ

ಇಂಗ್ಲೆಂಡ್ ದೇಶವನ್ನು ಹೆನ್ರಿ ಎಂಬ ಒಬ್ಬ ದೊರೆಯು ಆಳುತ್ತಿದ್ದನು ಆ ದೊರೆಗೆ ಹನ್ರಿ ಎಂಬ ಒಬ್ಬ ಮಗನಿದ್ದನು ಈ ರಾಜ ಕುಮಾರನು ಚಿಕ್ಕವನಾಗಿದ್ದಾಗ ಬಹು ತುಂಟನಾಗಿ ಕೆಟ್ಟ ಹುಡುಗರ ಜತೆಯನ್ನು ಸೇರಿ ಜನರಿಗೆ ಬಹಳ ತೊಂದರೆಯನ್ನು ಕೊಡುತ್ತಿದ್ದನು ದೊರೆಮಗನ ಸ್ನೇಹವಿದೆಯೆಂದು ಇವನ ಜತೆಗಾರರೂ ಬಹಳ ಹಾವಳಿಯನ್ನು ಮಾಡುತ್ತಿದ್ದರು

ಒಂದು ದಿನ ಹಾವಳಿಮಾಡುತ್ತಿದ್ದ ಇವನ ಕೆಟ್ಟ ಜತೆಗಾರರು ಸಿಕ್ಕಿಬಿದ್ದರು. ಜನರು ಅವರನ್ನು ಶಿಕ್ಷೆಮಾಡಿಸಬೇಕೆಂದು ಒಬ್ಬ ನ್ಯಾಯಾಧಿಪತಿಯ ಹತ್ತಿರಕ್ಕೆ ಎಳೆದುಕೊಂಡು ಹೋದರು. ದೊರೆಯ ಮಗನಿಗೆ ಈ ವರ್ತಮಾನವು ತಿಳಿಯಿತು ಆಗ ದೊರೆಯ ಮಗನು ನೆಟ್ಟಗೆ ನ್ಯಾಯಾಧಿಪತಿ ಇದ್ದಲ್ಲಿಗೆ ಬಂದು, ' ನನ್ನ ಸ್ನೇಹಿತನನ್ನು ಈಗಲೇ ಬಿಟ್ಟು ಬಿಡಬೇಕು ' ಎಂದನು. ನ್ಯಾಯಾಧಿಪತಿಯು ರಾಜ ಕುಮಾರನಿಗೆ ಸಮಾಧಾನವನ್ನು ಹೇಳುತ್ತಿದ್ದನು. ಅಷ್ಟಕ್ಕೆ ರಾಜ ಕುಮಾರನಿಗೆ ಕೋಪ ಬಂದು ನ್ಯಾಯಾಧಿಪತಿಯ ಕಪಾಳಕ್ಕೆ ಎರಡೇಟು ಕೊಟ್ಟನು.

ನ್ಯಾಯಾಧಿಪತಿಯು ರಾಜ ಕುಮಾರನನ್ನು ಅಲ್ಲಿಯೇ ಹಿಡಿಸಿ ತಪ್ಪುಮಾಡಿದವರನ್ನು ನಿಲ್ಲಿಸುವಂತೆ ನಿಲ್ಲಿಸಿ ನ್ಯಾಯಾಧಿಪತಿಯನ್ನು ಹೊಡೆದುದಕ್ಕಾಗಿ ಅವನನ್ನು ಅಲ್ಲಿಯೇ ಶಿಕ್ಷೆ ಮಾಡಿದನು ಈ ವಿಚಾರವು ದೊರೆಗೆ ತಿಳಿಯಿತು ದೊರೆಯು ನ್ಯಾಯಾಧಿಪತಿಯ ಧೈರ್ಯಕ್ಕೂ ನ್ಯಾಯಕ್ಕೂ ಮೆಚ್ಚಿ ಅವನಿಗೆ ಬೇಕಾದ ಮರ್ಯಾದೆಯನ್ನು ಮಾಡಿದನು.

ಸ್ವಲ್ಪ ಕಾಲದಲ್ಲಿಯೇ ಆ ದೊರೆಯು ಸತ್ತನು. ಈ ರಾಜ ಕುಮಾರನಾದ ಹೆನ್ರಿಯೇ ದೊರೆಯಾದನು. ರಾಜ ಕುಮಾರನು ಪಟ್ಟಕ್ಕೆ ಬಂದಮೇಲೆ ಒಂದುದಿನ ತನ್ನ ದೇಶದ ದೊಡ್ಡದೊಡ್ಡ ಮನುಷ್ಯರನ್ನೆಲ್ಲ ಕರಸಿದನು ಆ ದಿನ ನ್ಯಾಯಾಧಿಪತಿಯೂ ಹೋದನು ತಾನು ಆಗ ಮಾಡಿದ ಶಿಕ್ಷೆಯನ್ನು ಮನಸ್ಸಿನಲ್ಲಿಟ್ಟಿರುವ ಈ ದೊರೆಯು ತನಗೆ ತಕ್ಕ ಶಿಕ್ಷೆ ಮಾಡದೆ ಬಿಡನೆಂದು ಹೆದರಿ ಈ ನ್ಯಾಯಾಧಿಪತಿಯು ಶಂಕಿಸುತ್ತಿದ್ದನು ಪದ್ಧತಿಯ ಮೇರೆ ದೊರೆಗೆ ನಮಸ್ಕರಿಸಲು ಸಿಂಹಾಸನದ ಹತ್ತಿರವೂ ಹೋದನು. ಆಗ ದೊರೆಯು, ಆದರದಿಂದ ನ್ಯಾಯಾಧಿಪತಿಯನ್ನು ಕಂಡು ಬಹು ಮರ್ಯಾದೆ ಮಾಡಿ 'ನೀನು ಕಲಿಸಿದ ವಿವೇಕವನ್ನು ನಾನು ಎಂದಿಗೂ ಮರೆವುದಿಲ್ಲ' ಎಂದು ಹೇಳಿ, ಇವನು ಮಾಡಿದ ನ್ಯಾಯವನ್ನು ಕೊಂಡಾಡಿ 'ಬಹು ಕಾಲ ನೀನು ನ್ಯಾಯಾಧಿಪತಿಯಾಗಿ ನನ್ನ ರಾಜ್ಯದಲ್ಲಿರಬೇಕು' ಎಂದನು

---

## ೩೮ ಒಳ್ಳೆಯ ಮೂಕ

ಮೈಸೂರು ಪಟ್ಟಣದ ಹಾಗೆ ಒಂದು ದೊಡ್ಡ ಪಟ್ಟಣದಲ್ಲಿ ಒಬ್ಬ ಭಿಕ್ಷದವನಿದ್ದನು ಅವನು ಹೆಚ್ಚಾಗಿ ದುಡ್ಡು ಸಂಪಾದಿಸಬೇಕೆಂದು ಎಷ್ಟೆಷ್ಟು ಉಪಾಯ ಮಾಡಿದರೂ ಅವನಿಗೆ ದುಡ್ಡು ಸಿಕ್ಕುತಿರಲಿಲ್ಲ ಕೊನೆಗೆ ಅವನು ಮೂಗನೆಂದು ನಟಿಸುತ್ತ ಒಂದು ಮಾತನ್ನೂ ಆಡದೆ ಕೈ ಬಾಯಿ ಸನ್ನೆಯಿಂದ ಭಿಕ್ಷವನ್ನು ಬೇಡುತ್ತ ಆ ಪಟ್ಟಣದ ಯಾವುದೋ ಒಂದು ಮೂಲೆಯಲ್ಲಿ ಕುಳಿತನು ಅಲ್ಲಿ ಅವನು ಮೂಕನೆಂದು ಅನೇಕರು ದುಡ್ಡನ್ನು ಕೊಡುತ್ತಿದ್ದರು ಮೂಕರಿಗೆ ಕುಂಟರಿಗೆ ಕುರುಡರಿಗೆ ದಾನ ಮಾಡುವುದು ಧರ್ಮ

ಒಂದು ದಿನ ಇವನ ಗುರುತುಕಂಡವನೊಬ್ಬನು ಇವನನ್ನು ನೋಡಿ ಭಿಕ್ಷವನ್ನು ಕೊಟ್ಟು 'ಅಯ್ಯೋ! ಪಾಪ! ನೀನು ಮೂಕನಾಗಿ ಎಷ್ಟು ದಿವಸವಾಯಿತಪ್ಪಾ' ಎಂದನು ಭಿಕ್ಷುಕನು ಒಡನೆಯೆ 'ನಾನು ಚಿಕ್ಕವನಾಗಿದ್ದಾಗಲೆ' ಎಂದು ಮಾತನಾಡಿಬಿಟ್ಟನು. ಇವನೀಗ ಒಳ್ಳೆಯ ಮೂಕ!

---

## ೩೯. ಸುಲ್ತಾನ್ ಮಹಮ್ಮದ್ ಘುಜ್ನಿ

ಅಫ್‌ಘಾನಸ್ಥಾನ್ ಎಂಬ ಒಂದು ದೇಶವಿರುವುದು. ಈ ದೇಶದ ಜನರಿಗೆ ಅಫ್‌ಘನ್‌ರು ಎಂದು ಹೆಸರು ಅವರು ಬಹು ಶಕ್ತರು, ನೋಡಲಿಕ್ಕೆ ಚೆನ್ನಾಗಿ

ದ್ದರೂ ಭಯವನ್ನುಂಟುಮಾಡುವಂತೆ ಇರುವರು. ಒಂದಾನೊಂದು ಕಾಲದಲ್ಲಿ ಅವರನ್ನು ಸುಲ್ತಾನ್ ಮಹಮ್ಮದ್ ಆಳುತಿದ್ದನು ಘಜ್ನಿ ಪಟ್ಟಣವೇ ಅವನಿಗೆ ಮುಖ್ಯ ಪಟ್ಟಣವಾಗಿದ್ದುದರಿಂದ ಅವನನ್ನು ಸುಲ್ತಾನ್ ಮಹಮ್ಮದ್ ಘಜ್ನಿ ಎಂದು ಕರೆಯುತಿದ್ದರು. ಅವನು ತನ್ನ ರಾಜ್ಯವನ್ನು ಸಮಾಧಾನಸ್ಥಿತಿಗೆ ತಂದುಕೊಂಡು ಹಿಂದೂಸ್ಥಾನವನ್ನು ಕೊಳ್ಳೆ ಹೊಡೆವುದಕ್ಕಾಗಿ ಸುಮಾರು ಹನ್ನೆರಡು ಹದಿನಾಲ್ಕು ಆವೃತ್ತಿ ದಂಡೆತ್ತಿ ಬಂದನು

ಹಿಂದೂಸ್ಥಾನವನ್ನು ಕೊಳ್ಳೆಹೊಡೆದು ಘಜ್ನಿ ಪಟ್ಟಣವನ್ನು ಸೇರಿ ಸುಲ್ತಾನನು ಸಂತೋಷದಲ್ಲಿದ್ದಾಗ ಒಬ್ಬ ಮುದುಕಿಯು ಅರಮನೆಯ ಬಾಗಿಲಿಗೆ ಬಂದು ಹೊ ! ಎಂದು ಕೂಗಿಕೊಂಡಳಂತೆ ಸುಲ್ತಾನನು ಒಡನೆಯೆ ಆ ಮುದುಕಿಯನ್ನು ಕರೆತರಿಸಿ ' ನಿನಗೆ ಏನು ಆಗಬೇಕು ? ' ಎಂದು ಕೇಳಿದನು ಆಗ ಮುದುಕಿಯು ಬಹು ಕೋಪದಿಂದಲೂ ದುಃಖದಿಂದಲೂ-ಒಂದು ದೇಶವನ್ನು ಆಳಲಿಕ್ಕೆ ಶಕ್ತಿ ಇಲ್ಲದ ಮೇಲೆ ಸುಲ್ತಾನನೆಂದು ಹೊಗಳಿಸಿಕೊಳ್ಳಬೇಕೆ ? ನೀನೆಂತಹ ದೊರೆ ? ನಿನ್ನ ರಾಜ್ಯಭಾರವೆಷ್ಟರದು ! ಇತರ ದೇಶಗಳನ್ನು ಕೊಳ್ಳೆ ಹೊಡೆದು ಬರುವುದಕ್ಕೆ ನಿನಗೆ ಹೇಗೆ ಮನಸ್ಸು ಬಂದಿತು ! ನಿನ್ನ ದವಲತ್ತು ಕೈಯಲ್ಲಾಗದ ದವಲತ್ತು ನನ್ನ ಮಗನನ್ನು ಯಾರೋ ಕೊಂದುಹಾಕಿರುವರು. ಪ್ರಜೆಗಳಿಗೆ ಇಂತಹ ತೊಂದರೆ ಬಾರದಂತೆ ನೋಡಿಕೊಳ್ಳಲಾರದ ದೊರೆ ಎಂತಹ ದೊರೆ ? ತೆಗೆ—ಎಂದು ಗದರಿಸಿಕೊಂಡಳಂತೆ.

ಅದಕ್ಕೆ ಸುಲ್ತಾನನು ಕೋಪಿಸಿಕೊಳ್ಳದೆ ಅವಳ ಮಾತಿನಲ್ಲಿ ಗೌರವವಿಟ್ಟು ಅವಳು ಹೇಳಿದುದನ್ನೆಲ್ಲ ಕೇಳಿ ಅವಳನ್ನು ಸಮಾಧಾನ ಪಡಿಸಿ ಕಳುಹಿಸಿದನೆಂದು ಹೇಳುವರು. ಈ ಸುಲ್ತಾನನೇ ಹಿಂದೂ ದೇಶದಲ್ಲಿ ಪ್ರಸಿದ್ಧವಾದ ಸೋಮನಾಥೇಶ್ವರ ವಿಗ್ರಹವನ್ನು ಮುರಿದು ಅಲ್ಲಿದ್ದ ಹಣವನ್ನೆಲ್ಲ ದೋಚಿಕೊಂಡು ಹೋದವನು.

---

## ೪೦. ರಾಣಿ ಅಹಲ್ಯಾಬಾಯಿ

ಇಂದೂರು ಸಂಸ್ಥಾನವೆಂದು ಒಂದು ರಾಜ್ಯವಿರುವುದು ಆ ರಾಜ್ಯಕ್ಕೆ ಅಹಲ್ಯಾಬಾಯಿಯು ರಾಣಿಯಾಗಿದ್ದಳು ಈಕೆಯು ಖಂಡೇರಾಯನ ಹೆಂಡತಿಯು. ಖಂಡೇರಾಯನು ಮಲಿರಾಯನೆಂಬ ಒಬ್ಬ ಮಗನನ್ನೂ ಕೆಲವು ಮಂದಿ ಹೆಣ್ಣು ಮಕ್ಕಳನ್ನೂ ಬಿಟ್ಟು ಸತ್ತನು ಖಂಡೇರಾಯನು ಸತ್ತಮೇಲೆ ಚಿಕ್ಕವನಾದ ಮಲಿರಾಯನು ದೊರೆಯಾದನು ಸ್ವಲ್ಪ ಕಾಲದಲ್ಲಿಯೇ ಅವನೂ ಸತ್ತುಹೋದನು ಮಲಿರಾಯನಿಗೆ ಮಕ್ಕಳಿಲ್ಲದುದರಿಂದ ಅಹಲ್ಯಾಬಾಯಿಯು ಇಂದೂರು ಸಂಸ್ಥಾನಕ್ಕೆ ರಾಣಿಯಾದಳು

ಕೈಯಲ್ಲಾಗದ ಹೆಂಗಸು ಸಿಂಹಾಸನದ ಮೇಲೆ ಇರುವಳೆಂದು ದುಷ್ಟ ಜನರು ತಿಳಿದು ರಾಣಿಯನ್ನು ಮೂಲೆಗೆ ಕೂಡಿಸಿ ದೊಡ್ಡದೊಡ್ಡ ಅಧಿಕಾರಕ್ಕೆ ತಾವೇ ಬಂದು

ಸಂಸ್ಥಾನವನ್ನೆಲ್ಲ ಹಾಳುಮಾಡಿ ತಾವು ಐಶ್ವರ್ಯವಂತರಾಗಬೇಕೆಂದೆಣಿಸಿ ರಾಣಿಯ ಮೇಲೆ ಒಳಗೊಳಗೆ ಪಿತೂರಿ ಮಾಡುತ್ತಿದ್ದರು ರಾಣಿಯು ಯಾರ ಮಾತನ್ನೂ ಕೇಳದೆ ಯಾರ ಸಹಾಯವನ್ನೂ ಅಪೇಕ್ಷಿಸದೆ ತನಗೆ ನ್ಯಾಯ ತೋರಿದಂತೆ ರಾಜ್ಯ ಭಾರ ಮಾಡುತ್ತ ದುಷ್ಟ ಜನರನ್ನು ಹಿಡಿಸಿ ಶಿಕ್ಷಿಸಿ ಸಂಸ್ಥಾನವನ್ನು ಸಮಾಧಾನ ಸ್ಥಿತಿಗೆ ತಂದಳು.

ದುಷ್ಟಜನರು ಕೆಲವರು ಮಗ್ಗುಲ ರಾಜ್ಯಗಳನ್ನು ಸೇರಿ ಅಲ್ಲಿದ್ದ ರಾಜಪುತ್ರ ರಾಜರು ಇಂದೂರು ರಾಜ್ಯದ ಮೇಲೆ ದಂಡೆತ್ತಿ ಬರುವಂತೆ ಮಾಡಿದರು ಆಗ ಅಹಲ್ಯಾಬಾಯಿಯು ಯೋಗ್ಯರಾದವರೊಡನೆ ಇಂದೂರು ಸೈನ್ಯವನ್ನು ರಾಜಪುತ್ರರ ಮೇಲೆ ಕಳುಹಿಸಿ ತಾನೇ ಯುದ್ಧಕ್ಕೆ ಹೋಗಲು ಸಿದ್ಧಳಾದಳು ಯುದ್ಧದಲ್ಲಿ ರಾಜಪುತ್ರರು ಸೋತು ಓಡಿದರು ರಾಣಿ ಅಹಲ್ಯಾಬಾಯಿಯು ರಾಜ್ಯಭಾರ ಮಾಡುವವರೆಗೂ ರಾಜಪುತ್ರರು ಇಂದೂರಿಗೆ ದಂಡೆತ್ತಿ ಬರಲಿಲ್ಲ

ಇವಳು ಸಿಂಹಾಸನಕ್ಕೆ ಬಂದಾಗ ರಾಜ್ಯದಲ್ಲಿ ಕಳ್ಳಕಾಕರ ಭಯವು ಬಹಳ ವಾಗಿದ್ದಿತು ಆ ದುಷ್ಟರನ್ನು ಅಡಗಿಸುವುದಕ್ಕೆ ರಾಣಿಯು ಒಂದು ಒಳ್ಳೆಯ ಉಪಾಯವನ್ನು ಹುಡುಕಿದಳು. ರಾಣಿಗೆ ಮದುವೆಯಿಲ್ಲದ ಹಣ್ಣು ಮಗಳೊಬ್ಬಳು ಇದ್ದಳು. ಮನೆತನದವನಾದ ಯಾವ ದೊಡ್ಡ ಮನುಷ್ಯನು ಆ ಕಳ್ಳಕಾಕರನ್ನು ಅಡಗಿಸುವನೋ ಅವನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿಕೊಡುವೆನೆಂದು ಸಾರಿಸಿದಳು ದೊಡ್ಡ ಮನೆತನದವನಾದ ಜಸವಂತರಾವ್ ಎಂಬಾತನು ಕಳ್ಳಕಾಕ ರನ್ನು ಹಿಡಿದು, ಅಲ್ಲಲ್ಲೆ ಕಾವಲುಗಾರರನ್ನಿಟ್ಟು ಜನಗಳಿಗೆ ಅನುಕೂಲಪಡಿಸಿ ಕೊಟ್ಟನು ತಾನು ಸಾರಿಸಿದ್ದ ಮೇರೆ ತನ್ನ ಮಗಳಾದ ಮುಕ್ತಾಬಾಯಿಯನ್ನು ಅವಳು ಅವನಿಗೆ ಕೊಟ್ಟು ಮದುವೆ ಮಾಡಿದಳು

ಒಂದು ಸಣ್ಣ ಊರಾಗಿದ್ದ ಇಂದೂರು ಇವಳ ಕಾಲದಲ್ಲಿ ಜನಭರಿತವಾದ ಸೊಗಸಾದ ಒಂದು ದೊಡ್ಡ ಪಟ್ಟಣವಾಯಿತು ಈ ರಾಣಿಯು ಪರರ ದ್ರವ್ಯಕ್ಕೆ ಆಶೆಬೀಳುತ್ತಿರಲಿಲ್ಲ ರಾಣಿಯಾಗಿದ್ದರೂ ಊಟ ಉಪಚಾರಗಳಲ್ಲಿಯೂ ಉಡಿಗೆ ತೊಡಿಗೆಗಳಲ್ಲಿಯೂ ಮಿತವಾಗಿದ್ದು ಬೇಕಾದಷ್ಟು ಹಣವನ್ನು ಕೂಡಿಹಾಕಿದಳು ಹೀಗೆ ಕೂಡಿಹಾಕಿದ ಹಣವನ್ನು ದಾನ ಧರ್ಮಗಳಲ್ಲಿಯೂ ಸತ್ರ, ಕೆರೆ, ಕಟ್ಟಗಳನ್ನು ಕಟ್ಟಿಸುವುದರಲ್ಲಿಯೂ ಶಿಥಿಲವಾದ ದೇವಾಲಯಗಳನ್ನು ಸರಿಮಾಡಿಸುವುದರಲ್ಲಿಯೂ ಉಪಯೋಗಿಸಿದಳು. ಪುಣ್ಯಕ್ಷೇತ್ರವಾದ ಗಯೆಯಲ್ಲಿ ರಾಣಿ ಅಹಲ್ಯಾಬಾಯಿ ಮಾಡಿದ ಧರ್ಮವು ಈಗಲೂ ನಡೆಯುತ್ತಿರುವುದು ಇಂದೂರಿನಲ್ಲಿ ಈಗಲೂ ಅಹ ಲ್ಯಾಬಾಯಿಯನ್ನು ದೇವತೆಯಂತೆ ಪೂಜಿಸುವರು.

---

## ೪೧. ದೊರೆಯ ಸಂಪಾದನೆ

ಇಟಲಿಯೆಂದು ಒಂದು ದೇಶವಿರುವುದು. ಆ ದೇಶವನ್ನು ಒಬ್ಬ ರಾಜನು ಆಳುತಿದ್ದನು. ಆ ರಾಜನಿಗೆ ಬೇಟೆಯಾಡುವುದರಲ್ಲಿ ಬಹಳ ಪ್ರೀತಿಯಿದ್ದಿತು. ಆ

ದೊರೆಯು ಆಗಾಗ ಹೆಗಲಮೇಲೆ ಬಂದೂಕನ್ನು ಹಾಕಿಕೊಂಡು ಜತೆಯಲ್ಲಿ ಒಂದು ನಾಯಿಯನ್ನು ಕರೆದುಕೊಂಡು ಬೇಟೆಗೆ ಹೋಗುವ ಪದ್ಧತಿಯುಂಟು. ಒಂದು ದಿನ ದೊರೆಯೊಬ್ಬನೇ ಹೋಗುತ್ತಿದ್ದಾಗ ಒಬ್ಬ ರೈತನು ಬೇಟೆಗಾರನಂತೆ ಇದ್ದವನನ್ನು ದೊರೆಯೆಂದು ತಿಳಿಯದೆ 'ಸ್ವಾಮಿ ನೀವು ಚೆನ್ನಾಗಿ ಬೇಟೆಯಾಡುವರಂತೆ ಕಾಣುತ್ತೀರಿ ನನ್ನ ಕೋಳಿಮೊಟ್ಟೆಗಳನ್ನು ಒಂದು ನರಿಯು ಆಗಾಗ ಕದ್ದುಕೊಂಡು ಹೋಗುತ್ತಿರುವುದು ನೀವು ಅದನ್ನು ಹೊಡೆದು ನನ್ನ ಬದುಕನ್ನು ಕಾಪಾಡಬೇಕು ಸ್ವಾಮಿ' ಎಂದು ಕೇಳಿಕೊಂಡನು ದೊರೆಯು 'ಒಳ್ಳೆಯದು ನಾಳೆ ರಾತ್ರಿ ಕಾದಿದ್ದು ಹೊಡೆಯುತ್ತೇನೆ, ನಿನ್ನ ಮನೆಯನ್ನು ತೋರಿಸು' ಎಂದು ಕೇಳಿದನು ರೈತನು ಮನೆಯನ್ನು ತೋರಿಸಿದನು

ಮರುದಿನ ತಾನು ಹೇಳಿದ್ದ ಮೇರೆಗೆ ಬಂದು, ಕಾದು ಆ ನರಿಯನ್ನು ಹೊಡೆದನು ರೈತನಿಗೆ ಬಹು ಸಂತೋಷವಾಯಿತು ರೈತನು ಬೇಟೆಗಾರನನ್ನು ತನ್ನೊಡನೆ ಊಟಮಾಡಿಕೊಂಡು ಹೋಗಬೇಕೆಂದು ಬಲಾತ್ಕರಿಸಿದನು ದೊರೆಯು ಒಪ್ಪಿ ಅಲ್ಲಿಯೇ ಊಟಮಾಡಿದನು ಊಟವಾದ ಮೇಲೆ ರೈತನು ಎರಡು ಭಂಗಾರದ ನಾಣ್ಯಗಳನ್ನು ಬೇಟೆಗಾರನಿಗೆ ಕೊಟ್ಟನು ದೊರೆಯು ಅವನ್ನು ತೆಗೆದುಕೊಂಡು, ಟಣ್ ಎಂದು ಹಾರಿಸಿ ಸರಿನೋಡಿ, 'ನಾನು ಕಷ್ಟಪಟ್ಟು ಮೊದಲು ಸಂಪಾದಿಸಿದ ಹಣವು ಇದೇ' ಎಂದು ಬಹು ಸಂತೋಷಪಟ್ಟು ತನ್ನ ಪಟ್ಟಣಕ್ಕೆ ಹಿಂದಿರುಗಿದನು

ಮೂರನೆಯ ದಿನ ಬೆಳಗಾಗುತ್ತಲೆ ಒಬ್ಬ ಅಧಿಕಾರಿಯು ಬಂದು ಈ ರೈತನ ಮನೆಯ ಬಾಗಿಲನ್ನು ತಟ್ಟಿದನು ರೈತನು ಬಾಗಿಲನ್ನು ತೆಗೆದು ಅಧಿಕಾರಿಯನ್ನು ನೋಡಿ ದಿಗಿಲುಬಿದ್ದನು ಅಧಿಕಾರಿಯು ರೈತನಿಗೆ ದೊರೆಯು ಕೊಟ್ಟುಕಳುಹಿಸಿದ ಉಡುಗೊರೆಗಳನ್ನು ಕೊಟ್ಟು ರೈತನ ಮನೆಯಲ್ಲಿ ಊಟ ಮಾಡಿ ನರಿಯನ್ನು ಕೊಂದುದುದಕ್ಕೆ ಹಣವನ್ನು ತೆಗೆದುಕೊಂಡು ಹೋದವನು ತಮ್ಮ ದೊರೆಯೇ ಎಂದು ಹೇಳಿ ಅವನ ಮನಸ್ಸಿಗೆ ಆಶ್ಚರ್ಯವನ್ನುಂಟುಮಾಡಿದನು

---

## ೪೨ ರಾಜನಂತೆ

ಮಸಿಡೋನಿಯಾ ದೇಶಕ್ಕೆ ದೊರೆಯಾದ ಅಲೆಕ್ಸಾಂಡರನು ಹಿಂದೂಸ್ಥಾನದ ಮೇಲೆ ದಂಡೆತ್ತಿ ಬಂದನು ಪುರೂರವ ರಾಯನೆಂಬ ಒಬ್ಬ ರಾಜಾಧಿರಾಜನು ಜೇಲಂ ನದಿಯ ದಡದ ಮೇಲೆ ಅಲೆಕ್ಸಾಂಡರನನ್ನು ಅಡ್ಡಹಾಕಿದನು ಪುರೂರವನ ಸೈನ್ಯವು ಬಲವಾಗಿರುವುದೆಂದು ತಿಳಿದು ಅಲೆಕ್ಸಾಂಡರನು ಶಕ್ತರಾದ ಕೆಲವರನ್ನು ಕರೆದುಕೊಂಡು, ರಾತ್ರಿಯವೇಳೆ ತನ್ನ ಪಾಳೆಯದಿಂದ ಸ್ವಲ್ಪ ಕೆಳಕ್ಕೆ ಹೋಗಿ ನದಿಯನ್ನು ದಾಟಿ ಪುರೂರವನ ಸೈನ್ಯವನ್ನು ಮುತ್ತಿಗೆ ಹಾಕಿದನು

ಆ ಮೇಲೆ ಬಹಳ ಭಯಂಕರವಾದ ಯುದ್ಧವು ನಡೆಯಿತು ಯುದ್ಧದಲ್ಲಿ ಪುರೂರವನು ಸೋತು ಹೋಗಿ ಸೆರೆ ಸಿಕ್ಕಿದನು. ಆಗ ಗ್ರೀಕ್ ಸೇನೆಯವರು ಸೆರೆ

ಸಿಕ್ಕಿದ ಪುರೂರವನನ್ನು ಅಲೆಕ್ಸಾಂಡರ್ ಇದ್ದಲ್ಲಿಗೆ ಕರೆದುಕೊಂಡು ಹೋದರು. ನಿರ್ಭಯವಾಗಿ ನಿಂತುಕೊಂಡಿದ್ದ ಪುರೂರವನನ್ನು ನೋಡಿ, ಮೆಚ್ಚಿ, ಅಲೆಕ್ಸಾಂಡರನು 'ನಿನಗೆ ಏನು ಆಗಬೇಕು' ಎಂದು ಕೇಳಿದನು ಪುರೂರವನು ಅದಕ್ಕೆ 'ನನ್ನನ್ನು ದೊರೆಯಂತೆ ಕಾಣಬೇಕು' ಎಂದನು 'ನಿನಗೆ ಇನ್ನೇನೂ ಹೆಚ್ಚಾಗಿ ಬೇಡವೆ?' ಎಂದು ಅಲೆಕ್ಸಾಂಡರನು ಕೇಳಲು 'ದೊರೆಯಂತೆ ಎಂಬುದರಲ್ಲಿ ಎಲ್ಲವೂ ಬಂದಿತಲ್ಲವೇ?' ಎಂದು ಪುರೂರವ ರಾಯನು ಉತ್ತರವನ್ನು ಕೊಟ್ಟನು ಅಲೆಕ್ಸಾಂಡರನು ಅವನನ್ನು ಅದೇ ಮೇರೆ ಆದರಿಸಿ ಅವನ ರಾಜ್ಯವನ್ನು ಅವನಿಗೆ ಕೊಟ್ಟನಲ್ಲದೆ ತಾನು ಗೆದ್ದ ಮಗ್ಗುಲ ರಾಜ್ಯವನ್ನೂ ಅವನಿಗೇ ಕೊಟ್ಟನು

———

## ೪೩. ಕಮಠ ಪತಿ —(ಭಂಗಾರದ ಆವೆ)—(೧)

ಒಂದು ದೊಡ್ಡ ಕಾಡು ಆ ಕಾಡಿನಲ್ಲಿ ಒಂದು ಬೆಟ್ಟ ಆ ಬೆಟ್ಟದ ಮಗ್ಗುಲಲ್ಲಿ ಒಂದು ಸಣ್ಣ ನದಿ ಆ ನದಿಗೆ ಸ್ವಲ್ಪ ದೂರದಲ್ಲಿ ಒಂದು ಬೆಸ್ತರ ಹಳ್ಳಿ ಆ ಹಳ್ಳಿಯಲ್ಲಿ ಒಂದು ಸಣ್ಣ ಗುಡಿಸಿಲು ಅಲ್ಲಿ ಒಬ್ಬ ಮುದುಕನೂ ಮುದುಕಿಯೂ ವಾಸವಾಗಿದ್ದರು ಆ ಮುದುಕನು ನಿತ್ಯವೂ ಹತ್ತಿರದಲ್ಲಿಯೇ ಇದ್ದ ಹೊಳೆಯಲ್ಲಿ ಮೀನು ಹಿಡಿದು ಅಲ್ಲಿಗೆ ಸ್ವಲ್ಪ ದೂರದಲ್ಲಿದ್ದ ಪಟ್ಟಣಕ್ಕೆ ತೆಗೆದುಕೊಂಡು ಹೋಗಿ ಮಾರಿ, ಬಂದ ಹಣದಲ್ಲಿ ಜೀವನ ಮಾಡಿಕೊಂಡು ಸುಖವಾಗಿದ್ದನು

ಹೀಗಿರುವಾಗ ಒಂದು ದಿವಸ ಅವನು ಒಡ್ಡಿದ್ದ ಬಲೆಗೆ ಮೀನುಗಳ ಜತೆಯಲ್ಲಿ ಭಂಗಾರದಂತೆ ಥಳಥಳಿಸುವ ಆವೆಯೊಂದು ಬಿದ್ದಿತು ಮೂರು ಗಂಟೆಯ ಹೊತ್ತಿಗೆ ಬಲೆಯಲ್ಲಿದ್ದುದನ್ನೆಲ್ಲ ತೆಗೆದುಕೊಂಡು ಮನೆಗೆ ಬಂದನು ಅಲ್ಲಿ ಆವೆಯನ್ನು ಮಾತ್ರ ತೆಗೆದು ಅಟ್ಟದ ಮೇಲೆ ಇಟ್ಟು ಮೀನುಗಳನ್ನೆಲ್ಲ ತೊಳೆಯುವಂತೆ ಹೆಂಡತಿಗೆ ಹೇಳಿ, ಎಲ್ಲೋ ಹೊರಕ್ಕೆ ಹೋದನು ಅವನ ಹಂಡತಿಯು ಮೀನುಗಳನ್ನು ತೊಳೆಯುತಿದ್ದಳು.

ಆಗ 'ಎಲ್ಲಮ್ಮ, ನಿನ್ನ ಗಂಡನು ನನ್ನನ್ನು ಇಲ್ಲಿಟ್ಟಿರುವನು ಹೊಗೆ! ನಾನು ತಡೆಯಲಾರೆನು! ದಯಪಟ್ಟು ನನ್ನನ್ನು ಇನ್ನೆಲ್ಲಾದರೂ ಇಡಮ್ಮಾ!' ಎಂದು ಆವೆಯು ಆ ಮುದುಕಿಗ ಕೇಳುವಂತೆ ಹೇಳಿತು ಮುದುಕಿಯು ಸುತ್ತ ಮುತ್ತೂ ನೋಡಿದಳು ಅಲ್ಲಿ ಯಾರೂ ಇರಲಿಲ್ಲ ಮುದುಕಿಯು 'ಹೊರಗೆ ಎಲ್ಲೋ ಯಾರೋ ಆಡಿಕೊಂಡ ಮಾತಿರಬಹುದು' ಎಂದುಕೊಂಡು ತನ್ನ ಕೆಲಸವನ್ನು ಬೇಗ ಬೇಗ ಮಾಡುತಿದ್ದಳು ಮತ್ತೆ ಆ ಮಾತುಗಳೇ ಮುದುಕಿಗೆ ಕೇಳ ಬಂದುವು. 'ಇದೇನಿರಬಹುದು? ಹೊಗೆಯನ್ನು ತಡೆಯಲಾರೆ ಎಂದರೆ ಅಟ್ಟದ ಮೇಲೆ ಯಾರಾದರೂ ಇರುವರೇ ನೋಡೋಣ' ಎಂದು ಮುದುಕಿಯು ಅಟ್ಟಕ್ಕೆ ಹತ್ತಿ ನೋಡಿದಳು. ಅಲ್ಲಿ ಏನೋ ಥಳಥಳಿಸುತ್ತಿದ್ದಿತು. ಜನರಾರೂ ಇರಲಿಲ್ಲ. ಅವಳು ಥಳಥಳಿಸುತಿದ್ದ ಕಡೆಗೆ ಕೈ ನೀಡಲು ಅಲ್ಲಿ ಆವೆಯು ಇದ್ದಿತು.

'ಇದೇನು ಆಶ್ಚರ್ಯ ! ಆವೆಯು ಮಾತನಾಡುವುದೆ ? ಏನಾದರೂ ಆಗಲಿ, ಈ ಆವೆಯಂತೂ ಅಪೂರ್ವವಾಗಿದೆ ಹೊಗೆಯಾದರೋ ಇಲ್ಲಿ ಅಡರಿಕೊಂಡಿರುವುದು ನಿಜ ಈ ಚಿನ್ನದ ಆವೆಯೇ ಮಾತನಾಡಿದ್ದರೂ ಆಡಿರಬಹುದು ಇದನ್ನು ತೆಗೆದು ಇನ್ನೆಲ್ಲಾದರೂ ಒಳ್ಳೆಯ ಸ್ಥಳದಲ್ಲಿ ಇಡೋಣ' ಎಂದು ಆ ಮುದುಕಿಯು ಅದನ್ನು ಕೆಳಕ್ಕೆ ತಂದು ಒಂದು ಕಾಲು ಮಣೆಯ ಮೇಲೆ ಇಟ್ಟು ತನ್ನ ಕೆಲಸಕ್ಕೆ ಹೋದಳು ಗಂಡನು ಬರುವ ಹೊತ್ತಾಯಿತೆಂದು ಕೆಲಸವನ್ನು ಬೇಗಬೇಗ ಮಾಡಿ ಊಟಕ್ಕೆ ಸಿದ್ಧಮಾಡಿದಳು

ಅಷ್ಟರಲ್ಲಿ ಆ ಬೆಸ್ತರವನು ಬಂದನು, ಊಟಕ್ಕೆ ಕುಳಿತನು ಆಗ ಹೆಂಡತಿಯು ಅವನಿಲ್ಲದವೇಳೆ ನಡೆದುದನ್ನೆಲ್ಲ ಗಂಡನಿಗೆ ಹೇಳಿದಳು ಅದನ್ನೆಲ್ಲ ಕೇಳಿ ಬೆಸ್ತರವನು ಆಶ್ಚರ್ಯಪಡುತ್ತಿದ್ದನು ಅಷ್ಟುಹೊತ್ತಿಗೆ ಸರಿಯಾಗಿ ಆವೆಯು ಸಣ್ಣ ಧ್ವನಿಯಲ್ಲಿ 'ನನಗೂ ಸ್ವಲ್ಪ ಊಟಕ್ಕೆ ಇಕ್ಕಿ, ಬಹಳ ಹಸಿವಾಗಿದೆ' ಎಂದಿತು ಇದನ್ನು ಕೇಳಿದೊಡನೆ ಅವರಿಬ್ಬರಿಗೂ ಅತ್ಯಾಶ್ಚರ್ಯವುಂಟಾಯಿತು ಒಡನೆಯೆ ಅವರು ಒಂದು ತಳಿಗೆಯಲ್ಲಿ ಅದಕ್ಕೆ ಊಟಕ್ಕೆ ಇಕ್ಕಿದರು ಮೆಲ್ಲಮೆಲ್ಲನೆ ಆವೆಯು ಎಲ್ಲವನ್ನೂ ತಿಂದಿತು ಎಲ್ಲರ ಊಟವೂ ಆದ ಮೇಲೆ ಆವೆಯ ಮುಂದೆ ಇಟ್ಟಿದ್ದ ತಳಿಗೆಯನ್ನು ತೆಗೆಯಲು ಮುದುಕಿಯು ಬಂದಳು ಅವಳ ಆಶ್ಚರ್ಯವನ್ನೇನು ಹೇಳೋಣ ! ಆ ತಳಿಗೆಯ ತುಂಬ ಭಂಗಾರ !

---

## ೪೪ ಭಂಗಾರದ ಆವೆ—(೨)

ಮುದುಕಿಯು ತಟ್ಟೆಯಲ್ಲಿದ್ದ ಭಂಗಾರವನ್ನು ನೋಡಿ ಗಂಡನನ್ನು ಕೂಗಿದಳು ಗಂಡನು ಬಂದನು ಮುದುಕಿಗೆ ಸಂತೋಷವು ಉಕ್ಕಿ ಮಾತನಾಡುವುದಕ್ಕೆ ಆಗದಿದ್ದುದರಿಂದ ಅವಳು ತಟ್ಟೆಯ ಕಡೆ ಕೈಯನ್ನು ನೀಡಿದಳು ತಟ್ಟೆಯಲ್ಲಿದ್ದ ಭಂಗಾರವನ್ನು ನೋಡಿ ಅವನ ಮನಸ್ಸೂ ಹಿಗ್ಗಿತು ಆಮೇಲೆ ಮೆಲ್ಲನೆ ತಟ್ಟೆಯಲ್ಲಿದ್ದುದನ್ನು ಮುಟ್ಟಿ ನೋಡಿದನು ಗಟ್ಟಿಯಾಗಿದ್ದಿತು ಅದನ್ನು ತೆಗೆದುಕೊಂಡನು ಅದು ಕೈಗೆ ಭಾರವಾಗಿದ್ದಿತು ಅದರ ಬಣ್ಣವನ್ನು ನೋಡಿದನು. ಅದರ ಹಳದಿಯ ಬಣ್ಣವು ಥಳಥಳಿಸುತಿದ್ದಿತು ಆಗ ಆ ಮುದುಕನ ಮುಖವು ನಗೆ ಮುಖವಾಯಿತು ಹೆಂಡತಿಯನ್ನು ನೋಡಿ ಸಂತೋಷದಿಂದ, 'ಎಲೆ ! ಇದನ್ನು ಯಾರಿಗೂ ಹೇಳಬೇಡ. ನಾವು ಈ ಆವೆಯನ್ನು ಚೆನ್ನಾಗಿ ಸಾಕೋಣ ! ಇದೇ ನಮ್ಮ ದೇವರು,' ಎಂದನು ಅವಳು ಒಪ್ಪಿದಳು ಒಪ್ಪದೆ ಏನು !

ಅಂದಿನಿಂದ ಆ ಗಂಡಹೆಂಡಿರಿಬ್ಬರೂ ಆವೆಯನ್ನು ಪ್ರೀತಿಯಿಂದ ಸಾಕುತ್ತ ಬಂದರು ಅದು ನಿತ್ಯವೂ ಅವರಿಗೆ ಭಂಗಾರವನ್ನು ಕೊಡುತ್ತಬಂದಿತು. ಹೀಗಿರುವಾಗ ಒಂದು ದಿನ, ಆ ಆವೆಯು ಬೆಸ್ತರವನ ಹೆಂಡತಿಯನ್ನು, ನೋಡಿ 'ಅಜ್ಜಿ ! ಅಜ್ಜಿ ! ಊರಲ್ಲಿ ಏನು ವಿಶೇಷ ?' ಎಂದು ಕೇಳಿತು.

' ಅಯ್ಯೋ ! ನನಗೇನು ತಿಳಿವುದಪ್ಪಾ, ನಾನೇನು ಹೇಳಲಿ ? ನಿನ್ನೆ ಯಾರೋ ಏನೋ ಹೇಳಿಕೊಳ್ಳುತಿದ್ದರು. ನನಗೆ ಸ್ವಲ್ಪ ಕೇಳಿಸಿತು. ಈ ಊರ ದೊರೆಗೆ ಒಬ್ಬಳೇ ಮಗಳಷ್ಟೆ ! ಅವಳು ಬಲು ಚೆನ್ನಾಗಿದ್ದಾಳಂತೆ ಅವಳಿಗೆ ತಕ್ಕ ಗಂಡನನ್ನು ಎಲ್ಲೆಲ್ಲಿ ಹುಡುಕಿದರೂ ಸಿಕ್ಕಲಿಲ್ಲವಂತೆ ದೊರೆಗೆ ಬಹು ಚಿಂತೆಯಂತೆ ಇದೇ ವಿಶೇಷ ಕಾಣಪ್ಪ ನಾನಿನ್ನೇನು ಹೇಳಲಿ. ನನಗೇನು ಗೊತ್ತು ? ' ಎಂದು ಅಜ್ಜಿಯು ಹೇಳಿದಳು

'ಒಳ್ಳೆಯದು, ಅಜ್ಜಿ, ಹಾಗಾದರೆ ನೀನು ನನಗೊಂದು ಕೆಲಸವನ್ನು ಮಾಡಿ ಕೊಡಬೇಕು ನೀನು ' ಮಾಡುತ್ತೇನೆ ' ಎಂದರೆ ನಾನು ಹೇಳುತ್ತೇನೆ ಮಾಡಿ ಕೊಡುತ್ತೀಯೋ ? ಹೇಳು ' ಎಂದು ಆವೆಯು ಅಜ್ಜಿಯನ್ನು ಕೇಳಿತು ಅದಕ್ಕೆ ಅಜ್ಜಿಯು ಏನು ಹೇಳಬೇಕು ? ಆವೆಯು ಏನು ಕೇಳುವುದೋ ಏನೋ ! ಮಾಡುವುದಿಲ್ಲವೆಂದರೆ ಆವೆಗೆ ಕೋಪ ಬರಬಹುದು ಕೋಪಬಂದರೆ, ಭಂಗಾರದ ಮೇಲೆ ಆಶೆ ಪಾಪ ! ಮುದುಕಿಯಾದರೆ ಏನು ? ಭಂಗಾರದಮೇಲೆ ಯಾರಿಗೆ ತಾನೆ ಆಶೆಯಿಲ್ಲ ? ಆವೆಗೆ ಕೋಪಬಂದರೆ ಅದು ಭಂಗಾರ ಕೊಡುವುದನ್ನು ತಪ್ಪಿಸುವುದೋ ಏನೋ ಎಂದು ಭಯ ಏನು ಮಾಡಾಳು ? ಕೊನೆಗೆ ನನ್ನ ಕೈಯಲ್ಲಾದುದನ್ನು ಮಾಡಿಕೊಡುತ್ತೇನಪ್ಪ' ಎಂದಳು

ಆವೆಯು ಆಗ ' ಅಜ್ಜಿ, ಅಜ್ಜಿ, ನೀನು ದೊರೆಯ ಬಳಿಗೆ ಹೋಗಿ ಅವರ ಮಗಳನ್ನು ನನಗೆ ಕೊಟ್ಟು ಮದುವೆ ಮಾಡಿಕೊಡಬೇಕೆಂದು ಕೇಳು, ಈಗಲೇ ಹೊರಡು ' ಎಂದಿತು ಈ ಮಾತನ್ನು ಕೇಳಿದರೆ ದೊರೆಯು ಏನು ಮಾಡುವನೋ ಎಂಬ ಭಯದಿಂದ ಮುದುಕಿಯು ಗಡಗಡನೆ ನಡುಗುತ್ತ ಊರಿಗೆ ಹೊರಟಳು

---

## ೪೫. ಭಂಗಾರದ ಆವೆ—(೩)

ಆವೆಯ ಮಾತನ್ನೇ ಹೇಳಿಕೊಳ್ಳುತ್ತ ಮುದುಕಿಯು ನಿದಾನವಾಗಿ ಊರನ್ನು ಸೇರಿ, ಅರಮನೆಗೆ ಹೋದಳು ದೊರೆಯು ಓಲಗದಲ್ಲಿ ಕುಳಿತಿದ್ದನು ಅಲ್ಲಿ ಬಹು ಜನರು ಸೇರಿದ್ದರು ಎಲ್ಲರ ಇದಿರಿಗೂ ದೊರೆಯನ್ನು ಕೇಳುವುದಕ್ಕೆ ಮುದುಕಿಗೆ ಭಯ. ದೊರೆಯಬಳಿಗೆ ಬಂದಿದ್ದವರೆಲ್ಲರೂ ಅವರವರಿಗೆ ಬೇಕಾದುದನ್ನು ಹೇಳಿಕೊಂಡು ಕೇಳಿಕೊಂಡು ಹೊರಟು ಹೋದರು ಮುದುಕಿಯು ಮಾತ್ರ ಎಲ್ಲರೂ ಹೊರಟುಹೋಗುವ ವರೆಗೆ ಒಂದು ಕಂಭದ ಮಗ್ಗುಲಲ್ಲಿ ನಿಂತಿದ್ದು ದೊರೆಯು ಎದ್ದೊಡನೆ ಮುಂದೆ ಬಂದು ಅಡ್ಡಬಿದ್ದಳು

ದೊರೆಯು ಮುದುಕಿಯನ್ನು ನೋಡಿ, ' ಏನು ? ನನ್ನಿಂದ ಏನು ಆಗಬೇಕು ?' ಎಂದು ಕೇಳಿದನು. ಅದಕ್ಕೆ ಮುದುಕಿಯು ಗಡಗಡನೆ ನಡುಗುತ್ತ ಕೈಯನ್ನು ಮುಗಿದುಕೊಂಡು ಸುತ್ತೂ ನೋಡಿ, ' ಮಹಾಸ್ವಾಮಿ ಅಡ್ಡಬೀಳುತ್ತೇನೆ ನನ್ನ ತಪ್ಪಲ್ಲ ' ಎಂದಳು ' ಯಾವುದು ನಿನ್ನ ತಪ್ಪಲ್ಲ ? ಯಾವ ತಪ್ಪು ? ' ಎಂದು

ದೊರೆಯು ಮುದುಕಿಯನ್ನು ಕೇಳಿದನು ಇಷ್ಟಕ್ಕೆ ಮುದುಕಿಗೆ ಕಟ್ಟುಬೆವರಿಟ್ಟಿತು. ಮುದುಕಿಗೆ ಮಾತು ಹೊರಡದಂತಾಯಿತು ಆಗ ದೊರೆಯು ಮುದುಕಿಗೆ ಧೈರ್ಯ ವನ್ನು ಕೊಟ್ಟು ನಿದಾನವಾಗಿ ಎಲ್ಲವನ್ನೂ ಹೇಳೆಂದನು. ಮುದುಕಿಯು ಸಮಾಧಾನ ವನ್ನು ತಾಳಿ ಮತ್ತೆ ಅಡ್ಡಬಿದ್ದು, ಎದ್ದು 'ಸ್ವಾಮಿ, ನನ್ನ ತಪ್ಪಲ್ಲ ನನ್ನ ಗುಡಿಸ ಲಲ್ಲಿ ಒಂದು ಆವೆಯು ಇರುವುದು. ಅದು ನನ್ನನ್ನು ತಮ್ಮ ಬಳಿಗೆ ಕಳುಹಿಸಿರುವುದು. ನನ್ನ ತಪ್ಪಲ್ಲ, ಮಹಾಸ್ವಾಮಿ ಅದು ತಮ್ಮ ಮಗಳನ್ನು ಮದುವೆಯಾಗಬೇಕಂತೆ. ಅಪ್ಪಣೆಯಾಗಬೇಕು, ನನ್ನೊಡೆಯ !' ಎಂದಳು

ಈ ಮಾತುಗಳನ್ನು ಕೇಳಿ ದೊರೆಗೆ ಆಶ್ಚರ್ಯವಾಯಿತು 'ಆವೆ ಮಾತನಾ ಡುವುದೆಂದರೆ ಏನು ? ಈ ಮುದುಕಿಗೆ ಏನಾದರೂ ಹುಚ್ಚೊ?' ಎಂದು ಮುದುಕಿ ಯನ್ನು ನೋಡಿದನು. 'ಇವಳು ಹುಚ್ಚಿಯಂತೆ ಇಲ್ಲ, ಯಾವ ರಾಜಕುಮಾರನೋ ಈ ರೀತಿ ಹೇಳಿ ಕಳುಹಿಸಿರಬಹುದು' ಎಂದುಕೊಂಡು, ಒಂದು ನಿಮಿಷ ಆಲೋಚಿಸಿ, "ಒಳ್ಳೆಯದು ಈ ಉತ್ತರವನ್ನು ಕೊಟ್ಟು, ಈ ಮುದುಕಿಯನ್ನು ಕಳುಹಿಸುವೆನು. 'ನಾಳೆ ಬೆಳಗಾಗುವುದರಲ್ಲಿ ನನ್ನ ಅರಮನೆಯ ಮುಂದೆ ಒಂದು ದೊಡ್ಡ ಏಳುಪ್ಪರಿ ಗೆಯ ಮನೆಯನ್ನು ನಿನ್ನ ಆವೆಯು ಕಟ್ಟಿಸಿದರೆ ನಾವು ಮುಂದೆ ಹೇಳುತ್ತೇವೆ' ಎಂಬುದಾಗಿ ನಾವು ಹೇಳಿದೆವೆಂದು ನಿನ್ನ ಆವೆಗೆ ಹೇಳು ಹೋಗಿ ಬಾ" ಎಂದನು.

ಮುದುಕಿಯು ದೊರೆಯ ಅಪ್ಪಣೆಯನ್ನು ತೆಗೆದುಕೊಂಡು ದೊರೆಯನ್ನು ಕಂಡು ಮಾತನಾಡಿದ ಹೆಮ್ಮೆಯಿಂದ ಸರಸರನೆ ಮನೆಗೆ ಬಂದಳು. ಇವಳ ಬರುವಿಕೆ ಯನ್ನೇ ಕಾದುಕೊಂಡಿದ್ದ ಆವೆಯು ಮುದುಕಿಯು ಬಂದೊಡನೆ 'ಅಜ್ಜಿ, ದೊರೆಯು ಏನು ಹೇಳಿದನು ?' ಎಂದಿತು. ದೊರೆಯು ಕೊಟ್ಟ ಉತ್ತರವನ್ನು ಹೇಳದೆ ಅಜ್ಜಿಯು ಅರಮನೆಯನ್ನೂ ಓಲಗವನ್ನೂ ದೊರೆಯ ರೂಪವನ್ನೂ ಬಣ್ಣಿಸುವುದಕ್ಕೆ ಮೊದಲು ಮಾಡಿದಳು ಇವೆಲ್ಲ ಆವೆ ನೋಡಿದುದೇ. ಈ ಬಣ್ಣನೆಯು ಆವೆಗೆ ಬೇಕಾಗಿರಲಿಲ್ಲ ಆದರೆ ಮುದುಕಿಯು ಬಿಡಳು ಆವೆಯು ಬೇಸರದಿಂದ ಮುದುಕಿಯು ಹೇಳಿದುದ ನ್ನೆಲ್ಲ ಕೇಳಿದ ಹಾಗೆ ಮಾಡಿ ಕೊನೆಗೆ 'ದೊರೆಯು ಏನು ಹೇಳಿದನು ?' ಎಂದು ಕೇಳಿತು. ಆಗ ಮುದುಕಿಯು 'ದೊರೆಯು ಹೇಳುವುದು ನಮ್ಮಿಂದ ಆಗತಕ್ಕುದಲ್ಲ' ಎಂದಳು. ಆವೆಗೆ ಕೋಪ ಬಂದು, 'ನಿನ್ನಿಂದ ಆಗಲಿ, ಆಗದಿರಲಿ, ದೊರೆಯು ಹೇಳಿದುದನ್ನು ಹೇಳು' ಎಂದಿತು. ಮುದುಕಿಯು ಚೆನ್ನಾಗಿ ಜ್ಞಾಪಿಸಿಕೊಂಡು ದೊರೆಯು ಹೇಳಿದುದನ್ನು ಆಗ ಆವೆಗೆ ಹೇಳಿದಳು

---

## ೪೬. ಭಂಗಾರದ ಆವೆ—(೪)

ಏಳುಪ್ಪರಿಗೆಯ ಮನೆಯು ನಾಳೆ ಬೆಳಗಾಗುವುದರಲ್ಲಿ ನಿರ್ಮಾಣವಾಗಬೇ ಕೆಂದು ದೊರೆಯು ಹೇಳಿ ಕಳುಹಿಸಿದ ಉತ್ತರವನ್ನು ಆವೆ ಕೇಳಿ 'ಅಜ್ಜಿ, ಅದಕ್ಕೇನು ಚಿಂತೆ ? ಈ ಉಂಗುರವನ್ನು ತೆಗೆದುಕೊ—ಎಂದು ಒಂದು ಭಂಗಾರದ ಉಂಗುರ ವನ್ನು ಬಾಯಿಯಿಂದ ಉಗುಳಿ-ಬೇಗಹೋಗಿ ಊಟಮಾಡು. ಸಾಯಂಕಾಲದ

ಮುಂದೆ ಊರಿಗೆ ಹೋಗು ಕತ್ತಲೆಯಾದಮೇಲೆ ದೊರೆಯು ತೋರಿಸಿದ್ದ ಮೈದಾನವನ್ನು ಸೇರಿ ನಾಳೆ ಬೆಳಗಾಗುವುದರಲ್ಲಿ ಇಲ್ಲಿ ಏಳುಪ್ಪರಿಗೆಯ ಮನೆಯಾಗಬೇಕು ಎಂದು, ಈ ಉಂಗುರದಿಂದ ಆ ಸ್ಥಳದಲ್ಲಿ ಮೂರಾವೃತ್ತಿ ಬಡಿದು ಹೊರಟು ಬಾ' ಎಂದು ಹೇಳಿತು.

ಆವೆಯ ಕೆಲಸದಲ್ಲಿ ಅಜ್ಜಿಗೂ ಆದರ ಹುಟ್ಟಿತು. ಅಜ್ಜಿಯು ಬೇಗಬೇಗನೆ ಊಟಮಾಡಿ ಹೋಗಿ ಬರುವೆನೆಂದು ಆವೆಗೆ ಹೇಳಿ ಊರಿಗೆ ಹೊರಟಳು ಸಾಯಂಕಾಲಕ್ಕೆ ಸರಿಯಾಗಿ ಊರನ್ನು ಸೇರಿದಳು ಕತ್ತಲೆಯಾದ ಮೇಲೆ ಅವಳು ಮೈದಾನಕ್ಕೆ ಹೋಗಿ ಆವೆ ಹೇಳಿದಂತೆ ಮಾಡಿ ತನ್ನ ಹಳ್ಳಿಗೆ ಹಿಂದಿರುಗಿ ಬಂದು ತಾನು ಮಾಡಿದುದನ್ನೆಲ್ಲ ಆವೆಗೆ ಹೇಳಿದಳು ಆವೆಯು ಆ ರಾತ್ರಿ ಇನ್ನಿಷ್ಟು ಹೆಚ್ಚಾಗಿ ಭಂಗಾರವನ್ನು ಕೊಟ್ಟು ಅಜ್ಜಿಗೆ ಸಂತೋಷವನ್ನುಂಟುಮಾಡಿತು

ಇತ್ತಲಾಗಿ ದೊರೆಯು ಮುದುಕಿಯ ಮಾತನ್ನೇ ಚಿಂತಿಸುತಿದ್ದು ರಾತ್ರಿಯನ್ನೆಲ್ಲ ಕಳೆದು ಬೆಳಗಾಗುವುದನ್ನೇ ನೀರಿಕ್ಷಿಸಿಕೊಂಡಿದ್ದು, ಬೆಳಗಾದೊಡನೆಯೇ ಎದ್ದು ಹೊರಕ್ಕೆ ಬಂದು ಮೈದಾನದ ಕಡೆಗೆ ತಿರುಗಿದನು ಅವನು ಅಲ್ಲಿ ಕಂಡ ಆಶ್ಚರ್ಯವೇನಿರಬಹುದು? ನೀವು ಹೇಳಿ, ದೊಡ್ಡ ಅರಮನೆ ಅರಮನೆ ತಾನೆ! ಏಳುಪ್ಪರಿಗೆಯ ಮನೆಯನ್ನು ನೋಡಿ ದೊರೆಯು ಬೆರಗಾದನು ಅಷ್ಟರಲ್ಲಿಯೇ ಆ ಬೆಸ್ತರ ಮುದುಕಿಯು ಬಂದು ಅಡ್ಡಬಿದ್ದಳು ದೊರೆಯು ಏನು ಹೇಳಬೇಕು? ಒಂದು ರಾತ್ರಿಯಲ್ಲಿ ಅಂತಹ ಅರಮನೆ ಸಿದ್ಧವಾಗುವುದೆಂದು ದೊರೆಯು ತಿಳಿದಿರಲಿಲ್ಲ

ಆಗ ಹಾಗೆಯೆ ಒಂದು ಕ್ಷಣ ಚಿಂತಿಸಿ, ದೊರೆಯು ಮುದುಕಿಯನ್ನು ನೋಡಿ, 'ಉಪ್ಪರಿಗೆಯ ಮನೆಯೊಂದನ್ನು ಕಟ್ಟಿದರೇನಾಯಿತು? ಅರಮನೆಯ ಸುತ್ತಲೂ ಉದ್ಯಾನ ವನವಿರಬೇಕು. ಉದ್ಯಾನ ವನದಲ್ಲಿ ನಾನಾವಿಧ ಫಲ ಪುಷ್ಪ ಲತಾಗೃಹಗಳಿರಬೇಕು ಒಂದೆಡೆಯಲ್ಲಿ ನೀರು ಹರಿಯುತಿರಬೇಕು, ಇನ್ನೊಂದೆಡೆಯಲ್ಲಿ ನೀರು ಹಾರುತಿರಬೇಕು ಅರಮನೆಯಲ್ಲಾದರೋ ಸಕಲ ಪದಾರ್ಥಗಳೂ ತುಂಬಿರಬೇಕು ಇಷ್ಟೆಲ್ಲ ನಾಳೆ ಬೆಳಗಾಗುವುದರಲ್ಲಿ ಸಿದ್ಧವಾದರೆ ನನ್ನ ಮಗಳನ್ನು ಕಮಠ ಪತಿಗೆ ಕೊಟ್ಟು ವಿವಾಹ ಮಾಡಿಕೊಡುತ್ತೇನೆ' ಎಂದು ಆ ಮುದುಕಿಗೆ ಹೇಳಿದನು ಆಗ ಮುದುಕಿಯು ಅಡ್ಡಬಿದ್ದು ದೊರೆಯ ಅಪ್ಪಣೆಯನ್ನು ಪಡೆದು ಹಿಂದಿರುಗಿದಳು

ಮುದುಕಿಯು ದೊರೆಯ ಅಪ್ಪಣೆಯನ್ನು ಆವೆಗೆ ತಿಳಿಹಿಸಿದಳು. ಆವೆಯು ಸ್ವಲ್ಪವೂ ಲಕ್ಷಿಸದೆ 'ಆಗಬಹುದು ಅಜ್ಜಿ, ಈ ಸಾಯಂಕಾಲ ಊರಿಗೆ ಹೋಗಿ ಈ ಉಂಗುರದಿಂದ ಇಂತಿಂತಹುದು ಈ ಈ ಕಡೆ ಆಗಬೇಕೆಂದು ಬಡಿದುಬಿಟ್ಟು ದೊರೆಗೆ ಕಾಣಿಸಿಕೊಳ್ಳದಂತೆ ಹೊರಟು ಬಾ' ಎಂದು ಹೇಳಿತು ಅಜ್ಜಿಯು ಒಪ್ಪಿದಳು

ಅತ್ತಲಾಗಿ ದೊರೆಯು ಯಾರು ಬಂದು ಗಿಡವನ್ನು ನಡುವರು, ಯಾರು ಕಾಲುವೆಯನ್ನು ತೆಗೆಯುವರು, ಯಾರು ಅರಮನೆಯನ್ನು ಅಲಂಕರಿಸುವರು, ನೋಡೋಣವೆಂದು, ಕತ್ತಲೆಯಾಗುವವರೆಗೂ ಅಲ್ಲಿಯೇ ನೋಡುತಿದ್ದನು. ಬರುವ

ವರು ಯಾರು ? ಕತ್ತಲೆಯಾದ ಮೇಲೆ ನಾನು ಹೇಳಿದುದು ಆವೆಗೆ ಅಸಾಧ್ಯವಾಗಿರ ಬಹುದು , ಆದುದರಿಂದಲೆ ಈವರೆಗೂ ಯಾರೂ ಬರಲಿಲ್ಲ. ಇನ್ನು ಅದರ ಚಿಂತೆ ಏನು-ಎಂದು, ಶಯ್ಯಾಗೃಹಕ್ಕೆ ಹೊರಟು ಹೋದನು

ಸಾಯಂಕಾಲದಲ್ಲಿ ಮುದುಕಿಯು ಬಂದುದಾಯಿತು. ಉಂಗುರದಿಂದ ಅಲ್ಲಲ್ಲಿಯೇ ಬಡಿದುದೂ ಆಯಿತು ಬೆಳಗಾಗುವುದರಲ್ಲಿ ಫಲ ಪುಷ್ಪ ಭರಿತವಾದ ಉದ್ಯಾನವನ, ಎಲ್ಲೆಲ್ಲಿ ನೋಡಿದರೂ ನವಿಲುಗಳ ಕುಣಿದಾಟ, ಕೋಗಿಲೆಗಳ ಮಧುರ ಧ್ವನಿ, ಗಿಳಿಗಳ ಮೆಲ್ನುಡಿ, ಅಲ್ಲಲ್ಲಿ ಲತಾಗೃಹಗಳು, ಗುಳಬುಳನೆ ಹರಿಯುವ ಸಣ್ಣ ಹೊಳೆ, ಹೊಳೆಯ ದಡದಲ್ಲಿ ಜಿಂಕೆಗಳ ಹಿಂಡು, ಎಷ್ಟು ಹೇಳುವುದು ! ದೊರೆಯು ಅಪೇಕ್ಷಿಸಿದುದಕ್ಕೆ ನಾಲ್ಕರಷ್ಟು ಅತಿಶಯವಾಗಿ ನಿರ್ಮಿತವಾಗಿದ್ದಿತು ದೊರೆಯು ಏಳುವುದರಲ್ಲಿ ಮುದುಕಿಯು ಸಿದ್ಧವಾಗಿ ಅರಮನೆಯ ಬಾಗಲಲ್ಲಿ ಕಾದಿದ್ದಳು. ಆ ಉದ್ಯಾನ ವನದ ಸುಗಂಧಮಯವಾದ ಮಂದ ಮಾರುತವೂ ಪಕ್ಷಿಗಳ ಇಂಪಾದ ಧ್ವನಿಯೂ ದೊರೆಯನ್ನು ಎಚ್ಚರಗೊಳಿಸಿದುವು ದೊರೆಯು ನೂತನವಾಗಿ ನಿರ್ಮಿತ ವಾದ ಉದ್ಯಾನ ವನವನ್ನು ನೋಡಿ ವಿಸ್ಮಿತನಾದನು.

ಅಷ್ಟುಹೊತ್ತಿಗೆ ಮುದುಕಿಯು ಹೇಳಿಕಳುಹಿಸಿದಳು ಈ ಕಮರ ಪತಿ ಯಾರೋ ವೇಷಧಾರಿಯಾದ ವರ ಪುರುಷನಿರಬಹುದೆಂದು ದೊರೆಯು ಆಲೋಚಿಸಿ, ಆ ಮುದುಕಿಯನ್ನು ಕರೆಯಿಸಿ, ' ಆಗಲಿ, ನನ್ನ ಪುತ್ರಿಯನ್ನು ಕೊಡುವೆನು, ಲಗ್ನಕ್ಕೆ ಸಿದ್ಧವಾಗಿರಬಹುದೆಂದು ಕಮರ ಪತಿಗೆ ತಿಳಿಸಿ ' ಎಂದು ಹೇಳಿ ಮುದುಕಿಗೆ ಉಡುಗೊರೆ ತಾಂಬೂಲವನ್ನು ಕೊಟ್ಟು ಕಳುಹಿಸಿದನು

---

## ೪೭. ಭಂಗಾರದ ಆವೆ—(೫)

ದೊರೆಯ ಅಪ್ಪಣೆಯನ್ನು ಪಡೆದು ಉಡುಗೊರೆಯನ್ನುಟ್ಟು ತಾಂಬೂಲವನ್ನು ಸವಿಯುತ್ತ, ಅಜ್ಜಿಯು ಬಹು ಸಂಭ್ರಮದಿಂದ ಹಳ್ಳಿಯನ್ನು ಸೇರಿದಳು. ಅಜ್ಜಿಯ ಬರುವಿಕೆಯನ್ನೇ ಇದಿರುನೋಡುತ್ತಿದ್ದ ಆವೆಯು ಅಜ್ಜಿಯ ಸಂಭ್ರಮವನ್ನು ನೋಡಿ ತನ್ನ ಕೆಲಸವು ಕೈಗೂಡಿರಬಹುದೆಂದು ತಿಳಿಯಿತು ಲಗ್ನಕ್ಕೆ ಸಿದ್ಧವಾಗಿರಬಹು ದೆಂದು ದೊರೆಯು ಹೇಳಿದ ವರ್ತಮಾನವನ್ನು ಅಜ್ಜಿಯು ಸಂತೋಷದಿಂದ ಆವೆಗೆ ತಿಳಿಸಿದಳು ಈ ಶುಭ ಸಮಾಚಾರವನ್ನು ತಂದ ಅಜ್ಜಿಗೆ ಆವೆಯು ಮತ್ತಿಷ್ಟು ಭಂಗಾರವನ್ನು ಕೊಟ್ಟು ತೃಪ್ತಿಪಡಿಸಿ, ' ಅಜ್ಜಿ, ಅಜ್ಜಿ, ಇನ್ನು ನಿನ್ನ ಗಂಡನನ್ನು ಸ್ವಲ್ಪ ಇಲ್ಲಿಗೆ ಕಳುಹಿಸು ' ಎಂದಿತು ಅಜ್ಜಿಯು ಒಂದೇ ಹಾರಿಗೆ ಓಡಿ ಹೊಳೆಯಲ್ಲಿದ್ದ ಗಂಡನನ್ನು ಆವೆಯ ಬಳಿಗೆ ' ಬೇಗ ಹೋಗಿ ' ಎಂದು ಕಳುಹಿಸಿದಳು.

ಅವನು ಬಂದು ಕೈಮುಗಿದು ನಿಂತನು ಆಗ ಆವೆಯು ಅವನನ್ನು ನೋಡಿ, ' ಅಯ್ಯಾ, ನೀನು ನನ್ನನ್ನು ಬಹಳ ವಿಶ್ವಾಸದಿಂದ ಸಾಕುತಿದ್ದೀಯೆ ನನಗೆ ನಿನ್ನಿಂದ ಒಂದು ಕೆಲಸವಾಗಬೇಕು ' ಎಂದಿತು ಅದಕ್ಕೆ ಅವನು ' ಅಗತ್ಯ

ವಾಗಿ ಮಾಡಿಕೊಡುವೆನು' ಎಂದನು. ಹಾಗಾದರೆ ಈ ಕಾಡಿನ ಮಧ್ಯೇ ಒಂದು ದೊಡ್ಡ ಬೆಟ್ಟವಿರುವುದು. ಆ ಬೆಟ್ಟದಮೇಲೆ ಹೋದರೆ ಒಂದು ಕೋಡುಗಲ್ಲು ಕಾಣುವುದು ಅದನ್ನು ಬಳಸಿದರೆ ಒಂದು ಗುಹೆಯ ಬಿಲವು ಕಾಣುವುದು ಆ ಬಿಲದ ಬಳಿಗೆ ನೀನು ಹೋಗಿ ಈ ಭಂಗಾರದ ಗೋಲಿಯನ್ನು ಆ ಬಿಲದಲ್ಲಿ ಉರುಳಿಸು ಸ್ವಲ್ಪ ಹೊತ್ತಿನಲ್ಲೇ ಮಹಾಶೂರನೊಬ್ಬನು ಬರುವನು ಅವನನ್ನು ನೋಡಿ ನೀನು ಹೆದರಬೇಡ. ಅವನು ಬಂದೊಡನೆಯೆ ಲಗ್ನಸಾಮಗ್ರಿಗಳನ್ನೂ ಉಡುಗೆ ತೊಡುಗೆ ಗಳನ್ನೂ ತೆಗಿಸಿಕೊಂಡು ನೀವು ಬರಬೇಕೆಂದು ಮಹಾರಾಜರು ಆಜ್ಞಾಪಿಸಿರುವರು, ಎಂದು ಹೇಳು ಅವರು ಬೇಕಾದುದನ್ನು ತೆಗೆದುಕೊಂಡು ಬರುವರು ಬಂದೊ ಡನೆ ಅವರೆಲ್ಲರನ್ನೂ ನೀನು ಕರೆದುಕೊಂಡು ಬರಬೇಕು' ಎಂದಿತು

ಆ ಮುದುಕನು ಒಡನೆಯೆ ಬೆಟ್ಟಕ್ಕೆ ಹೊರಟು ಸ್ವಲ್ಪ ಹೊತ್ತಿನಲ್ಲಿಯೆ, ಎಲ್ಲರನ್ನೂ ಕರೆದುಕೊಂಡು ಹಿಂದಿರುಗಿದನು ಆ ಹಳ್ಳಿಯ ಗುಡಿಸಿಲ ಬಾಗಿಲಲ್ಲಿ ಪಲ್ಲಕ್ಕಿಯು ಸಿದ್ಧವಾಯಿತು ಭೇರಿಗಳ ಶಬ್ದವು ಭೋಂಕರಿಸಿತು ನೂರಾರು ಜನರು ಕತ್ತಿ ಕಠಾರಿಯನ್ನು ಹಿಡಿದು ಆರ್ಭಟಿಸುತ್ತಿದ್ದರು ಓಹೋ! ಅಂದು ಆ ಹಳ್ಳಿಯ ಸಡಗರವು ಎಷ್ಟಿರಬಹುದು. ಈ ಭಂಗಾರದ ಆನೆಯ ವಿಚಾರವು ಕೆಲವ ರಿಗೆ ಸ್ವಲ್ಪ ಸ್ವಲ್ಪ ತಿಳಿದಿದ್ದಿತು ಕೆಲವರಿಗೆ ತಿಳಿದೇ ಇರಲಿಲ್ಲ ಅಂದು ಬೆಸ್ತರೆ ಲ್ಲರೂ ಹೊಳೆಗೆ ಹೋಗುವುದನ್ನು ಬಿಟ್ಟು, 'ನಮ್ಮ ಮುದುಕಯ್ಯನ ಮನೆಗೆ ಯಾರೋ ಬಂದಿರುವರಂತೆ, ನಮಗೆಲ್ಲ ದೊರೆಯಂತೆ, ಈ ಊರ ದೊರೆಯ ಮಗ ಳನ್ನು ಅವರಿಗೆ ಕೊಡುವರಂತೆ ಬನ್ನಿರೋ ನಾವೆಲ್ಲರೂ ಹೋಗುವ' ಎಂದು ಬಹು ಉತ್ಸವದಿಂದ ಆನೆಯೊಡನೆ ಎಲ್ಲರೂ ಹೊರಟರು

ಪಟ್ಟಣವು ಬಲುಚೆನ್ನಾಗಿ ಶೃಂಗಾರವಾಗಿದ್ದಿತು ಆದರೆ ದೊರೆಯು ಜನ ರಿಗೆ ಮಾತ್ರ ಮಗಳ ಲಗ್ನವೆಂದು ಹೇಳಿರಲಿಲ್ಲ. ಅಳಿಯನು ಆನೆಯೋ, ರಾಜ ಕುಮಾರನೋ, ದೊರೆಗೆ ಸಂದೇಹ ಆದುದರಿಂದ ಯಾರಿಗೂ ಲಗ್ನ ವಿಚಾರವನ್ನು ತಿಳಿಸಿರಲಿಲ್ಲ ಆನೆಯ ಉತ್ಸವವು ಬಂದೊಡನೆ ಜನರು ರಾಜಬೀದಿಯಲ್ಲಿ ತುಂಬಿ ದರು ಜನರಾರಿಗೂ ಪಲ್ಲಕ್ಕಿಯಲ್ಲಿದ್ದ ಆನೆಯು ಗೋಚರಕ್ಕೆ ಬರಲಿಲ್ಲ ಪಲ್ಲಕ್ಕಿ ಯನ್ನು ರಾಜನು ಇದಿರುಗೊಂಡು ಅರಮನೆಗೆ ಕರೆತಂದನು. ಪಲ್ಲಕ್ಕಿಗೆ ಸುತ್ತಿದ್ದ ಪೀತಾಂಬರವನ್ನು ತೆಗೆದು ನೋಡಿದನು. ಅಳಿಯನು ನಿಜವಾಗಿಯೂ ಆನೆಯೆ!

---

## ೪೮ ಭಂಗಾರದ ಆನೆ—(೬)

ದೊರೆಯು ಆನೆಯನ್ನು ನೋಡಿದನು ಆಗ ಏನು ಮಾಡುವುದು? ದೊರೆಯು ಮಾತು ಕೊಟ್ಟಿದ್ದಾನೆ. ಕೊಟ್ಟ ಭಾಷೆಗೆ ತಪ್ಪುವುದು ಹೇಗೆ? ಆಗ ದೊರೆಯು, ಇತರರಾರಿಗೂ ಹೇಳಿಕಳುಹಿಸದೆ ಮಗಳನ್ನು ಕರೆದು ಗುಟ್ಟಾಗಿ 'ಅಮ್ಮಾ, ನೀನು ಈ ಆನೆಯನ್ನು ಮದುವೆ ಮಾಡಿಕೊಳ್ಳಬೇಕು ಈ ಆನೆಯೆ ನಿನಗೆ ಪತಿ ನೀನೇ ಅದರ ಸತಿ' ಎಂದು ಹೇಳಿ ಆನೆಯನ್ನು ಅವಳ ವಶಕ್ಕೆ

ಕೊಟ್ಟನು. ಅವಳ ಮನಸ್ಸಿನಲ್ಲಿ ಆಶ್ಚರ್ಯವೂ ದುಃಖವೂ ತುಂಬಿದುವು. ಆಗ ಏನು ಮಾಡುವುದಕ್ಕೂ ತೋರದೆ ಆವೆಯನ್ನು ತೆಗೆದುಕೊಂಡು ಹೋಗಿ ತನ್ನ ಶಯ್ಯಾಗೃಹದಲ್ಲಿ ಒಂದು ಮೂಲೆಯಲ್ಲಿಟ್ಟು ಬಲುಬೇಸರದಿಂದ ಕುಳಿತಳು.

ಬಹಳ ಹೊತ್ತು ರೋದಿಸುತ್ತಿದ್ದು, ಕೊನೆಗೆ–ಅಯ್ಯೋ! ನನ್ನ ಅದೃಷ್ಟ ಹೀಗಾಯಿತೇ! ದೇವರೇ —ಎಂದು ನಿಟ್ಟುಸಿರು ಬಿಡುತ್ತ ಊಟವನ್ನು ಮಾಡದೆ ಕೊಟಡಿಯ ಬಾಗಿಲನ್ನು ಹಾಕಿಕೊಂಡು ಯಾರು ಯಾರು ಊಟಕ್ಕೆ ಎಬ್ಬಿಸಿದರೂ ಏಳದೆ ಮಲಗಿದ್ದಳು ಸುಮಾರು ರಾತ್ರಿ ಒಂಬತ್ತು ಘಂಟೆಯ ಸಮಯವಾಯಿತು. ಆವೆಗೆ ಬಹಳ ಹಸಿವಾಯಿತು ಇದರ ಮೇಲೆ ತನ್ನ ಪ್ರಿಯೆಯಾದ ಆ ಸುಂದರಿಯು ಸಂಕಟಪಡುತ್ತಿದ್ದುದನ್ನು ನೋಡಿ ಆವೆಯು ಸಹಿಸಲಾರದೆ—ಎಲೆ! ಸುಂದರಾಂಗಿ, ನನಗೆ ಬಹಳ ಹಸಿವಾಗಿರುವುದು ನಮ್ಮ ಮನೆಯಲ್ಲಿ ನನ್ನನ್ನು ಹೀಗೆ ಯಾರೂ ಅನಾದರಣೆ ಮಾಡುತ್ತಿರಲಿಲ್ಲ ಹಸಿವು ಬಾಯಾರಿಕೆಗಳನ್ನು ನಾನು ತಡೆಯ ಲಾರೆನು ನನಗೆ ಆಹಾರವನ್ನು ಕೊಟ್ಟರೆ ನನ್ನ ಜೀವವು ಉಳಿಯುವುದು' ಎಂದಿತು

ಆ ರಾಜಪುತ್ರಿಯು ಆವೆಯ ಮಾತನ್ನು ಕೇಳಿ,—ಇದೇನು ಆಶ್ಚರ್ಯ! ಇದು ಮಾತನಾಡುವುದೇ! ಆಃ! ನಾನು ಎಂತಹ ಅಕಾರ್ಯ ಮಾಡಿದೆನು! ನನ್ನನ್ನು ಸೇರಿದ ಈ ಪ್ರಾಣಿಗೆ ಅನ್ನೋದಕವನ್ನಿತ್ತು ಕಾಪಾಡುವುದು ನನ್ನ ಧರ್ಮ ಇದರ ಮೇಲೆ ಪತಿಯನ್ನಾಗಿ ಸ್ವೀಕರಿಸಿದ ಈ ಕಮಠ ಪತಿಯ ಉಪಚಾರವನ್ನು ಮರೆತುದು ಮಹಾಪಾಪಕೃತ್ಯ ನಾನು ಪಾಪಿನಿಯಾದೆನು —ಎಂದುಕೊಂಡು ತಟ್ಟನೆ ಎದ್ದು, ಬೇಕಾದ ಭೋಜನ ಪದಾರ್ಥಗಳನ್ನು ತಂದು ಅಣಿಮಾಡಿ, ಬಾಗಿಲು ಹಾಕಿ,—ಇದೋ! ಭೋಜನಕ್ಕೆ ಸಿದ್ಧವಾಗಿರುವುದು. ನನ್ನ ಅಪರಾಧವನ್ನು ಕ್ಷಮಿಸಿ ಈ ಭೋಜನವಸ್ತುಗಳನ್ನು ಸ್ವೀಕರಿಸಬೇಕು—ಎಂದು ಪ್ರಾರ್ಥಿಸಿದಳು.

ಗುಣ ಸಂಪನ್ನೆಯಾದ ಆ ಸುಂದರಿಯನ್ನು ನೋಡಿ, ಮೆಚ್ಚಿ, ಕಮಠ ಪತಿಯು ಒಂದು ನಿಮಿಷಮಾತ್ರದಲ್ಲಿ ಅತ್ಯಂತ ಸುಂದರನಾದ, ಪ್ರಾಪ್ತವಯಸ್ಕ ನಾದ, ದಿವ್ಯ ರಾಜ ಕುಮಾರನಾಗಿ ನಿಂತು, ಆ ರಾಜ ಪುತ್ರಿಯ ಪಾಣಿಗ್ರಹಣವನ್ನು ಮಾಡಿದನು ಇವನ ಸೌಂದರ್ಯವನ್ನೂ, ಆವೆಯಿಂದ ಹೊರಟುಬಂದ ಇವನ ದಿವ್ಯಮೂರ್ತಿಯನ್ನೂ ನೋಡಿ ರಾಜಕುಮಾರಿಯು ಅತ್ಯಾಶ್ಚರ್ಯಯುಕ್ತಳಾಗಿಯೂ ಅತ್ಯಾನಂದಭರಿತಳಾಗಿಯೂ ಲಜ್ಜೆಯಿಂದೊಡಗೂಡಿದ ಮುಖವನ್ನು ತಗ್ಗಿಸಿಕೊಂಡು ನಿಂತಳು ಒಡನೆಯೇ ಚೇತರಿಸಿಕೊಂಡು,—ಆರ್ಯಪುತ್ರ, ನಾನು ಮಾಡಿದ ಅಪಕಾರ ವನ್ನು ಕ್ಷಮಿಸಬೇಕು—ಎಂದು ಕಮಠ ಪತಿಗೆ ನಮಸ್ಕರಿಸಿದಳು.

ಕಮಠ ಪತಿಯು ಆ ಸುಕುಮಾರಿಯನ್ನು ಎತ್ತಿ ಆಲಂಗಿಸಿಕೊಂಡು ಭೋಜನ ಮಾಡುತ್ತ, ತನ್ನ ವೃತ್ತಾಂತವನ್ನೆಲ್ಲ ಹೇಳುವೆನೆಂದು, ಅವಳನ್ನು ಸಮಾಧಾನಪಡಿಸಿ ಅನಂತರ ಇಬ್ಬರೂ ಭೋಜನಕ್ಕೆ ಕುಳಿತರು. ರಾಜಪುತ್ರಿಯು ಈ ಕಮಠ ಪತಿಯ ವೃತ್ತಾಂತವನ್ನು ತಿಳಿಯಲು ಬಹು ಆತುರಳಾಗಿದ್ದಳು.

## ೪೯. ಭಂಗಾರದ ಆನೆ—(೭)

ಕಮರಪತಿ ಆ ರಾಜ ಕುಮಾರಿ ಇಬ್ಬರೂ ತಮ್ಮ ತಮ್ಮಿಷ್ಟಾರ್ಥವು ಕೈಗೂಡಿದ ಸಂತೋಷದಿಂದ ಭೋಜನಮಾಡುತ್ತ ವಿನೋದವಾಗಿ ಕುಳಿತಿದ್ದಾಗ ರಾಜಕುಮಾರಿಯು-' ಆರ್ಯಪುತ್ರ ! ನಿಮ್ಮ ವಿಚಾರವನ್ನು ತಿಳಿಯಲು ನನ್ನ ಮನಸ್ಸು ಬಹಳ ತವಕಪಡುತಿರುವುದು '—ಎನ್ನಲು, ಕಮರ ಪತಿಯು ತನ್ನ ವೃತ್ತಾಂತವನ್ನು ಹೇಳ ತೊಡಗಿದನು

' ದೇವಿ ! ಲಾಲಿಸು. ನಾನು ಒಬ್ಬ ಗಂಧರ್ವ ರಾಜ ಕುಮಾರನು ಒಬ್ಬ ಋಷಿಯ ಶಾಪದಿಂದ ನಾನು ಕಮರನಾಗಿರುವೆನು ನನ್ನ ಸಹೋದರರೆಲ್ಲರೂ ಪಕ್ಷಿಗಳಾಗಿರುವರು ನಾನೂ ಅಪೇಕ್ಷಿಸಿದಾಗ ಪಕ್ಷಿಯಾಗಬಲ್ಲೆನು ನಾನು ಪಕ್ಷಿಯ ರೂಪದಿಂದ ಅನೇಕ ದೇಶಗಳನ್ನು ಸಂಚಾರ ಮಾಡಿದೆನು ಅನೇಕ ರಾಜಪುತ್ರಿಯರನ್ನು ನೋಡಿದೆನು ಆದರೆ ರೂಪಿನಲ್ಲಿಯೂ ಗುಣದಲ್ಲಿಯೂ ನಿನಗೆ ಸಮಾನರಾದವರನ್ನು ನಾನು ಎಲ್ಲೂ ನೋಡಲಿಲ್ಲ ಆದುದರಿಂದ ನಿನ್ನನ್ನು ವಿವಾಹಮಾಡಿಕೊಳ್ಳಬೇಕೆಂದು ಕಮರ ಪತಿಯಾಗಿ, ಬೆಸ್ತರವನ ಬಲೆಗೆ ಬಿದ್ದು, ಅಮಾನುಷವ್ಯಾಪಾರದಿಂದ ನಿನ್ನ ತಂದೆಯನ್ನು ಒಪ್ಪಿಸಿ, ನಿನ್ನನ್ನು ಸೇರಿರುವೆನು ಇನ್ನೂ ಸ್ವಲ್ಪ ಕಾಲ ನಾನು ಈ ವೇಷದಲ್ಲಿರಬೇಕಾದುದರಿಂದ ನನ್ನ ಈ ವೃತ್ತಾಂತವನ್ನು ನೀನು ಯಾರಿಗೂ ತಿಳಿಸಬೇಡ ನಾನು ರಾತ್ರಿಯಲ್ಲಿ ಮನುಷ್ಯರೂಪವನ್ನು ತಾಳುವೆನು ಹಗಲೆಲ್ಲ ಆನೆಯಲ್ಲಿ ಸೇರಿಹೋಗುವೆನು ಆಗಾಗ ಪಕ್ಷಿಯಾಗಿ ಹೊರಟು, ಗಿರಿ ನದೀ ತಟಾಕಗಳಲ್ಲಿಯೂ ಮನೋಹರವಾದ ಉದ್ಯಾನವನಗಳಲ್ಲಿಯೂ ನನ್ನ ಸಹೋದರರೊಡನೆ ಸ್ವೇಚ್ಛೆಯಾಗಿ ವಿಹರಿಸಿ ಮರಳಿ ಇಲ್ಲಿಗೆ ಬರುವೆನು ನಾನು ಹೊರ ಹೊರಟಾಗ ಜೀವರಹಿತವಾದ ಈ ಆನೆಯ ಶರೀರವನ್ನು ಮಾತ್ರ ನೀನು ಬಹಳ ಜಾಗರೂಕಳಾಗಿ ಕಾಪಾಡಬೇಕು ' ಎಂದು ಹೇಳಿ, ಭೋಜನಾನಂತರ ಆ ರಾಜಪುತ್ರಿಯ ವೃತ್ತಾಂತವನ್ನೆಲ್ಲ ಕೇಳುತ್ತ ರಾತ್ರಿಯನ್ನೆಲ್ಲ ವಿನೋದವಾಗಿ ಕಳೆದನು

ಅಷ್ಟರಲ್ಲಿಯೇ ಬೆಳಗಾಯಿತು ಬೆಳಗಾದೊಡನೆಯೆ ರಾಜಪುತ್ರನು ಆನೆಯಲ್ಲಿ ಐಕ್ಯವಾದನು ಇಂತಹ ಸುಕುಮಾರನು ತನ್ನ ಪತಿಯಾದುದಕ್ಕಾಗಿ ರಾಜಕುಮಾರಿಯು ಉಲ್ಲಾಸಪಡುತಿದ್ದಳು ಕೆಲ ದಿನಗಳು ಹೀಗೆಯೇ ಕಳೆದುವು ರಾಜಪುತ್ರಿಯ ತಾಯಿಗೆ ಮಾತ್ರ ತನ್ನ ಅಳಿಯನು ಆನೆ ಎಂಬುದು ಬಹಳ ಕೊರತೆಯಾಗಿದ್ದಿತು. ಮಗಳನ್ನು ಅನುರೂಪನಾದ ವರನಿಗೆ ಕೊಟ್ಟು ಮದುವೆ ಮಾಡಬೇಕೆಂದು ದೊರೆಗೂ, ಬೇರೆ ಮದುವೆ ಮಾಡಿಕೊಳ್ಳೆಂದು ಮಗಳಿಗೂ ಹೇಳಿ ದೊರೆಯ ಹೆಂಡತಿಯು ಆಗಾಗ ಹಿಂಸಿಸುತಿದ್ದಳು. ಈ ಕೆಟ್ಟ ಆನೆಯು ತನ್ನ ಕೈಗೆ ಎಂದಾದರೂ ಸಿಕ್ಕಿದರೆ ಅದನ್ನು ದೂರ ಸಮುದ್ರಕ್ಕಾದರೂ ಸಾಗಿಸಬೇಕು, ಎಂಬವರೆಗೂ ಅವಳಿಗೆ ಮನಸ್ಸು.

ಹೀಗಿರುವಾಗ ಒಂದು ದಿನ ಆ ಕಮರ ಪತಿಯು ತನ್ನ ಆನೆಯ ಶರೀರವನ್ನು ಪತ್ನಿಯ ವಶದಲ್ಲಿ ಬಿಟ್ಟು ಪಕ್ಷಿವೇಶವನ್ನು ತಾಳಿ ಹೊರಗೆ ಸಂಚಾರ ಹೋಗಿದ್ದನು.

ರಾಜ ಪುತ್ರಿಯು ಆವೆಯು ಶರೀರವನ್ನು ಇಟ್ಟಿದ್ದ ಕೊರಡಿಯ ಬಾಗಿಲನ್ನು ಹಾಕಿ ಕೊಳ್ಳದೆ ಬೇರೆ ಕೊರಡಿಯಲ್ಲಿ ಏನೋ ಕೆಲಸವಾಗಿ ಕುಳಿತಿದ್ದಳು. ಆ ವೇಳೆಯಲ್ಲಿ ತಾಯಿಯು ಮಗಳೊಡನೆ ಮಾತನಾಡಬೇಕೆಂದು ಹಠಾತ್ತಾಗಿ ಬಂದಳು. ಮಗಳು ತನ್ನ ಕೊರಡಿಯಲ್ಲಿರಲಿಲ್ಲ ಅಷ್ಟರಲ್ಲಿಯೇ ಹಾಸಿಗೆಯ ಮೇಲೆ ಥಳಥಳಿಸುತಿದ್ದ ಆವೆಯ ಶರೀರವು ಕಾಣಿಸಿತು 'ಈ ಆವೆಯನ್ನು ನೆಚ್ಚಿಕೊಂಡು ತನ್ನ ಮಗಳಿಗೆ ಮಂಕು ಮುಚ್ಚಿರುವುದು ಇದನ್ನು ಹಾಸಿಗೆಯ ಮೇಲೆಯೇ ಇಟ್ಟುಕೊಂಡಿರುವಳು. ಇದೇನು ಭ್ರಮೆ!' ಎಂದು ತಾಯಿಯು ಆ ಆವೆಯನ್ನು ಎತ್ತಿ ಅದು ಜೀವ ರಹಿತವಾಗಿದ್ದುದನ್ನು ನೋಡಿ, 'ಆಃ ಇಂದಿನ ದೇವರು ನನ್ನ ಹರಕೆಯನ್ನು ಕೈಗೂಡಿಸಿದನು ಇದು ಸತ್ತುಹೋಯಿತೆಂಬ ವ್ಯಸನದಿಂದ ನನ್ನ ಮಗಳು ಎಲ್ಲೋ ದುಃಖಪಡುತ್ತ ಕುಳಿತಿರಬಹುದು ಇದನ್ನು ಬೆಂಕಿಯಲ್ಲಿ ಹಾಕಿ ಸುಡಿಸಿಬಿಟ್ಟು ಇನ್ನು ಮುಂದೆಯಾದರೂ ಅನುರೂಪನಾದ ವರನನ್ನು ಮದುವೆಮಾಡಿಕೊಳ್ಳುವಂತೆ ಮಗಳನ್ನು ಬಲಾತ್ಕಾರ ಮಾಡುವೆನು' ಎಂದುಕೊಂಡು ಆ ಆವೆಯ ಓಟೆಯನ್ನು ತೆಗೆದುಕೊಂಡು ಹೋಗಿ ಸುಡಿಸಿಬಿಟ್ಟಳು

ಅಷ್ಟರಲ್ಲಿ ಮಗಳು ಬಂದು ಕೊರಡಿಯಲ್ಲಿ ನೋಡಿದಳು ಆವೆಯು ಇರಲಿಲ್ಲ ತಾಯಿಯು ಆವೆಯನ್ನು ತೆಗೆದು ಎಲ್ಲಾದರೂ ಇಟ್ಟಿರಬಹುದೆಂದು ತಾಯಿಯ ಬಳಿಗೆ ಬಂದು, 'ಅಮ್ಮಣ್ಣಿ, ನನ್ನ ಆವೆಯೆಲ್ಲಿ ?' ಎಂದು ಕೇಳಿದಳು ತಾಯಿಯು ತಾನು ಮಾಡಿದುದನ್ನೆಲ್ಲ ಹೇಳಿಬಿಟ್ಟಳು ಮಗಳು ಹಾಗೆಯೇ ಮೂರ್ಛೆ ಹೋದಳು.

---

## ೫೦ ಭಂಗಾರದ ಆವೆ—(೮)

ಆವೆಯು ಸುಟ್ಟು ಬೂದಿಯಾಯಿತೆಂಬ ವರ್ತಮಾನವು ತಿಳಿದೊಡನೆ ಮಗಳು ದುಃಖಾತಿಶಯದಿಂದ ಜ್ಞಾನತಪ್ಪಿ ಬಿದ್ದುದನ್ನು ನೋಡಿ, ತಾಯಿಯು ತಲ್ಲಣಿಸಿದಳು. ಆಗ ಸಖೀ ಜನರು ರಾಜ ಕುಮಾರಿಗೆ ಬಹಳವಾಗಿ ಉಪಚರಿಸಿದರು. ಸಖೀ ಜನರ ಉಪಚಾರದಿಂದ ಸ್ವಲ್ಪ ಚೇತರಿಸಿಕೊಂಡು ಎದ್ದು ಆ ಆವೆಯ ನಿಜಸ್ಥಿತಿಯನ್ನು ತಿಳಿಸಿ ಇನ್ನು ನನ್ನ ಪ್ರಿಯನು ಬರುವುದಿಲ್ಲ' ಎಂದು ರೋದಿಸಲಾರಂಭಿಸಿದಳು.

ಮಗಳು ಮೂರ್ಛೆಹೋದ ಸಂಗತಿಯು ರಾಜನಿಗೆ ತಿಳಿದು ರಾಜನು ಓಲಗವನ್ನು ಬಿಟ್ಟು ಮಂತ್ರಿಯೊಡನೆ ರಾಣಿವಾಸಕ್ಕೆ ಬಂದನು ಅಲ್ಲಿ ಅದುವರೆಗೆ ನಡೆದ ಸಮಾಚಾರವನ್ನೆಲ್ಲ ರಾಜನಿಗೆ ತಿಳಿಸಿದರು ಅದನ್ನು ಕೇಳಿ ರಾಜನಿಗೆ ದುಃಖವೂ ಮಂತ್ರಿಗೆ ಆಶ್ಚರ್ಯವೂ ಉಂಟಾದುವು ಆಗ ಮಂತ್ರಿಯು ಚಿಂತೆಯಲ್ಲಿ ಮುಳುಗಿದ್ದ ಆ ಜನರನ್ನು ಸಮಯೋಚಿತವಾಗಿ ಸಂತೈಸಿ ಪಕ್ಷಿವೇಷಧಾರಿಯಾದ ಕಮರಪತಿಯ ವೃತ್ತಾಂತವನ್ನು ತಿಳಿಯಲು ಆ ಬೆಸ್ತಗಂಡ ಹೆಂಡರಿಗೆ ಹೇಳಿ ಕಳುಹಿಸಿದನು. ಅವರು ಸ್ವಲ್ಪ ದಿನಗಳಿಗೆ ಹಿಂದೆ ಗತಿಸಿಹೋದರೆಂದು ತಿಳಿದು ಬಹಳ ಚಿಂತಿಸಿ ಕೊನೆಗೆ ಆ ಪಟ್ಟಣದಲ್ಲೆಲ್ಲ ಈ ರೀತಿಯಾಗಿ ಸಾರಿಸಿದನು—

'ನಮ್ಮ ರಾಜಪುತ್ರಿಯು ಬಹಳ ಬೇಸರಗೊಂಡಿರುವಳು. ಅಪೂರ್ವವಾದ ಕಥೆಯಾಗಿದ್ದರೂ ನಿಜವಾಗಿದ್ದರೆ ಅಂತಹ ಕಥೆಗಳನ್ನು ಹೇಳಿ, ರಾಜ ಪುತ್ರಿಯ ಬೇಸರವನ್ನು ಹೋಗಲಾಡಿಸಿದವರಿಗೆ ವಿಶೇಷ ಮರ್ಯಾದೆಯು ದೊರಕುವುದು'

ಇದನ್ನು ಕೇಳಿ, ಮನೋಹರವಾದ ಕಥೆಗಳನ್ನು ಹೇಳುವುದರಲ್ಲಿ ಬಹು ಸಮರ್ಥರೆಂದು ಪ್ರಸಿದ್ಧಿಗೊಂಡ ಅನೇಕರು ಬಂದು, ನಾನಾ ವಿಧವಾದ ಕಥೆಗಳನ್ನು ಹೇಳಿದರು ಯಾರ ಕಥೆಯಲ್ಲೂ ತನ್ನ ಪ್ರಿಯನ ವೃತ್ತಾಂತವಿಲ್ಲದಿದ್ದುದರಿಂದ ಯಾವ ಕಥೆಯೂ ಇವಳ ಬೇಸರವನ್ನು ಹೋಗಲಾಡಿಸುವಷ್ಟು ಮನೋಹರವಾಗಿರಲಿಲ್ಲ. ಹೀಗಿರಲು ಒಂದು ದಿವಸ ಒಬ್ಬ ಬೇಟೆಗಾರನು ಬಂದು ತಾನು ನೋಡಿದ ಒಂದು ಆಶ್ಚರ್ಯವನ್ನು ರಾಜಪುತ್ರಿಗೆ ಹೇಳಲು ಅಪ್ಪಣೆಯನ್ನು ಕೇಳಿದನು ಅವನನ್ನು ಒಡನೆಯೆ ಒಳಕ್ಕೆ ಕರೆದುಕೊಂಡು ಹೋಗಿ ತಿಳಿಸಿದರು. ರಾಜಪುತ್ರಿಯು ತೆರೆಯ ಹಿಂದುಗಡೆ ಕುಳಿತುಕೊಂಡು ಕಥೆಯನ್ನು ಹೇಳಬಹುದೆಂದು ಅವನಿಗೆ ಹೇಳಿ ಕಳುಹಿಸಿದಳು. ಅವನು ತಾನು ನೋಡಿದ ಮಹಾಶ್ಚರ್ಯವನ್ನು ರಾಜ ಪುತ್ರಿಗೆ ಹೇಳಲಿಕ್ಕೆ ಆರಂಭಿಸಿದನು

'ತಾಯೆ! ಲಾಲಿಸಬೇಕು ನಾನು ನಿನ್ನೆಯ ದಿವಸ ಬೇಟೆಗಾಗಿ ಹೋಗಿದ್ದೆನು ಸಾಯಂಕಾಲದವರೆಗೂ ಕಾದು ಕಾಡೆಲ್ಲ ಸುತ್ತಿದೆನು, ನನಗೆ ಬೇಟೆಯಾವುದೂ ಸಿಕ್ಕಲಿಲ್ಲ. ಆಗ ದಣಿದು, ಬೇಸತ್ತು, ಒಂದು ನದಿಯ ದಡದ ಮೇಲೆ ಇದ್ದ ಮರದ ನೆಳಲಲ್ಲಿ ಬಿಲ್ಲನ್ನು ತಲೆಗೆ ಇಟ್ಟುಕೊಂಡು ಮಲಗಿದ್ದೆನು ನಾನು ಮಲಗಿದ್ದ ಮಾರ್ಗವಾಗಿ ಹತ್ತು ಪಕ್ಷಿಗಳು ಬಂದುವು ಅಂತಹ ಪಕ್ಷಿಗಳನ್ನು ನಾನು ಇದುವರೆಗೂ ಎಲ್ಲೂ ನೋಡಿರಲಿಲ್ಲ. ಹಾಗೆ ಬಂದು ಅವು ನದಿಯಲ್ಲಿ ಸ್ನಾನಮಾಡಿ, ಹೊರಟುವು ನನಗೆ ಒಳ್ಳೆಯ ಬೇಟೆ ಸಿಕ್ಕಿತೆಂದು ಅವುಗಳನ್ನು ಅಟ್ಟಿಕೊಂಡು ಹೊರಟೆನು ಆ ನದಿಯ ಹತ್ತಿರದಲ್ಲೆ ಒಂದು ಬೆಟ್ಟವಿದ್ದಿತು ಆ ಬೆಟ್ಟದ ಕಡೆ ಇವು ಹೊರಟುವು ನಾನೂ ಅವುಗಳ ಹಿಂದೆಯೆ ಓಡಿದೆನು ಆ ಬೆಟ್ಟದಲ್ಲಿ ಒಂದು ಗುಹೆ ಆ ಗುಹೆಯ ಬಾಗಿಲು ತೆರೆದಿದ್ದಿತು ಇನ್ನೇನು ನಾನು ಹೊಡೆಯಬೇಕು ಅಷ್ಟರಲ್ಲೆ ಕಾಡು, ನದಿ, ಬೆಟ್ಟ, ಗುಹೆ, ಪಕ್ಷಿ ಎಂಬೀಮಾತುಗಳನ್ನು ಕೇಳಿದೊಡನೆ ಆ ಗಂಧರ್ವರಾಜ ಕುಮಾರನು ಹೇಳಿದುದನ್ನೆಲ್ಲ ಜ್ಞಾಪಿಸಿಕೊಂಡು, ರಾಜಪುತ್ರಿಯು ತನ್ನ ಪತಿಯ ವೃತ್ತಾಂತವೆ ಇದೆಂದು ಬಹು ಆತುರದಿಂದ ಕೇಳುತಿದ್ದಳು. ಬೇಡರವನು 'ಇನ್ನೇನು ನಾನು ಹೊಡೆಯಬೇಕೆಂದಿದ್ದೆ, ಅಷ್ಟರಲ್ಲೆ—ಎಂದು ಹೇಳುತಿದ್ದ ಹಾಗೆ, ರಾಜಪುತ್ರಿಯು 'ಏನು ನೀನು ಹೊಡೆದು ಬಿಟ್ಟೆಯಾ? ಅಯ್ಯೊ! ಪಾಪಿ—ಎಂದು ಕಣ್ಣೀರು ಸುರಿಸಿದಳು.

ಆಗ ಬೇಡರವನು 'ಇಲ್ಲ! ತಾಯೆ! ಇಲ್ಲ! ನಾನು ಹೇಳುವುದನ್ನು ಸ್ವಲ್ಪ ಸಾವಧಾನದಿಂದ ಲಾಲಿಸಬೇಕು' ಎಂದು ಬೇಡಿಕೊಂಡು, ಮುಂದೆ ನಡೆದುದನ್ನು ಹೇಳಲು ಮೊದಲು ಮಾಡಿದನು. ನಾನು ಹೊಡೆಯಬೇಕು, ಅಷ್ಟರಲ್ಲಿ ಅವು ಆ ಗುಹೆಯೊಳಗೆ ನುಗ್ಗಿದುವು. ಅವು ನನಗೆ ಸಿಕ್ಕಿಬಿದ್ದುವೆಂದು ನಾನೂ ಆ ಗುಹೆಯೊಳಕ್ಕೆ

ನುಗ್ಗಿದೆನು. ಸ್ವಲ್ಪದೂರ ಹೋಗುವವರೆಗೂ ಆ ಗುಹೆಯು ಬಹು ಕತ್ತಲೆಯಾಗಿ ದ್ದಿತು ಆ ಕತ್ತಲೆಯಲ್ಲಿ ಹೋಗುತ್ತ ನಾನು ಕೆಳಕ್ಕೆ ಬಿದ್ದುಬಿಡಬೇಕು ಅಷ್ಟ ರಲ್ಲಿಯೇ ಕೆಳಕ್ಕೆ ಇಳಿವುದಕ್ಕೆ ಅನುಕೂಲವಾದ ಮೆಟ್ಟಿಲುಗಳೂ ಸ್ವಲ್ಪ ಬೆಳಕೂ ಕಾಣಬಂದುವು ಇದೇನೋ ಆಶ್ಚರ್ಯವಿರಬಹುದೆಂದು ಆ ಮೆಟ್ಟಿಲುಗಳನ್ನು ಇಳಿದು ಹೋದೆನು. ಅಲ್ಲಿ ಒಂದು ದೊಡ್ಡ ಆನೆಯ ಬಾಗಿಲು, ಆ ಬಾಗಿಲನ್ನು ದಾಟಿದೆನು ದಿವ್ಯವಾದ ಅರಮನೆ ಅರಮನೆಯ ಬಾಗಿಲಲ್ಲಿ ಜನರಾರೂ ಇರಲಿಲ್ಲ. ಹಾಗೆಯೆ ಮೆತ್ತಗೆ ಒಳಕ್ಕೆ ನುಗ್ಗಿದೆನು ಒಂದು ದೊಡ್ಡ ತೊಟ್ಟಿ ಆ ತೊಟ್ಟಿಯು ಧಳಧಳಿಸುತಿದ್ದಿತು ಅಲ್ಲಿ ಕಾಣಬಂದ ವಿಚಿತ್ರವನ್ನು ನೋಡಿ ನಾನು ಅಲ್ಲಿಯೇ ಬೆರಗಾಗಿ ನಿಂತೆನು

---

## ೫೧ ಭಂಗಾರದ ಆವೆ—(೯)

ನಾನು ಅಟ್ಟಿಸಿಕೊಂಡು ಬಂದ ಹತ್ತು ಪಕ್ಷಿಗಳೂ ಆ ತೊಟ್ಟಿಯಲ್ಲಿ ಕಟ್ಟಿದ್ದ ಹತ್ತು ಪಚ್ಚೆಯ ಪಂಜರಗಳನ್ನು ಸೇರಿದುವು ಒಡನೆಯೆ ಅಲ್ಲಿ ಹತ್ತು ಮಂದಿ ರಾಜ ಕುಮಾರರು ಕಾಣಬಂದರು ಪಂಜರದಲ್ಲಿ ಮಾತ್ರ ಪಕ್ಷಿಗಳು ಬಿದ್ದಿದ್ದುವು ಆ ರಾಜ ಕುಮಾರರು ಆ ತೊಟ್ಟಿಯ ಒಂದು ಪಾರ್ಶ್ವದಲ್ಲಿ ಸಿದ್ಧ ವಾಗಿದ್ದ ಪೀಠಗಳನ್ನು ಅಲಂಕರಿಸಿದರು. ಭೋಜನ ಸಾಮಗ್ರಿಗಳು ಸಿದ್ಧವಾದವು. ಹತ್ತು ಮಂದಿಯೂ ಭೋಜನಕ್ಕೆ ಕುಳಿತರು ಅವರಲ್ಲಿ ಒಬ್ಬನು ಮಾತ್ರ ಖಿನ್ನ ಮನಸ್ಕನಾಗಿರಲು ಇತರರು ಅವನನ್ನು ಹಾಸ್ಯಮಾಡತೊಡಗಿದರು. ಇಷ್ಟರಲ್ಲಿ ಒಂದು ಭಯಂಕರವಾದ ಶಬ್ದವು ಕೇಳಬಂದಿತು ನಾನು ಇನ್ನು ಅಲ್ಲಿ ನಿಲ್ಲಲಾರದೆ ಓಡಿಬಂದೆನು ಇದೇ ನಾನು ನೋಡಿದ ವಿಶೇಷ ! ' ಎಂದನು.

ರಾಜಪುತ್ರಿಯು ಅವನನ್ನು ಅಲ್ಲಿಯೇ ಇರೆಂದು ಹೇಳಿ ಅವನು ಹೇಳಿದ ಕಥೆ ಯನ್ನೆಲ್ಲ ತನ್ನ ತಂದೆಗೆ ತಿಳಿಸಿ—ಇದೇ ನನ್ನ ಪತಿಯ ವೃತ್ತಾಂತವು. ನನಗೆ ಆ ಗುಹಗೆ ಹೋಗಿಬರುವುದಕ್ಕೆ ಅಪ್ಪಣೆಯಾಗಬೇಕು, ಎಂದು ಬೇಡಿಕೊಂಡಳು. ದೊರೆಯು ಮಂತ್ರಿಯೊಡನೆ ಆಲೋಚಿಸಿ, ಆ ಬೇಡರವನಿಗೆ ಬೇಕಾದುದನ್ನು ಕೊಟ್ಟು, ಆ ಬೇಡನೊಡನೆ ಮಗಳನ್ನೂ ತನ್ನ ಮಂತ್ರಿಯನ್ನೂ ಪರೀಕ್ಷಿಸಲು ಗುಹಯ ಬಳಿಗೆ ಕಳುಹಿಸಿದನು. ಸಾಯಂಕಾಲದ ಹೊತ್ತಿಗೆ ಎಲ್ಲರೂ ಗುಹಯನ್ನು ಸೇರಿ ಆ ಗುಹಯ ಒಂದು ಮೂಲೆಯಲ್ಲಿ ಕುಳಿತುಕೊಂಡರು ಆ ಬೇಡರವನು ಹೇಳಿದ್ದಂತೆ ಅಪೂರ್ವ ವಾದ ಹತ್ತು ಪಕ್ಷಿಗಳು ಗುಹಯನ್ನು ಪ್ರವೇಶಿಸಿದುವು. ಇವರೂ ಹಿಂದೆಯೇ ಹೊರಟು ತೊಟ್ಟಿಯ ಬಾಗಿಲ ಹಿಂದುಗಡೆ ಮರೆಯಾಗಿ ನಿಂತರು, ಪಕ್ಷಿಗಳು ಪಂಜರ ವನ್ನು ಸೇರಿ, ಒಡನೆಯೇ ಹತ್ತು ಮಂದಿ ರಾಜಕುಮಾರರಾಗಿ ನಿಂತು ಭೋಜನಕ್ಕೆ ಕೂಡುವುದಕ್ಕೆ ಮುಂದೆ ದೇವರನ್ನು ಸ್ತೋತ್ರಮಾಡಲಿಕ್ಕೆ ಆರಂಭಿಸಿದರು ಆಗ ರಾಜ ಕುಮಾರಿಯ ಕಮಠ ಪತಿಯು ದೇವರನ್ನು ಸ್ತೋತ್ರ ಮಾಡಿದ ಮೇಲೆ ತನ್ನ ಪ್ರಿಯೆಯೊಡನೆ ಬೇಗ ಸೇರುವಂತೆ ವರವನ್ನು ಕೊಡೆಂದು ದೇವರನ್ನು ಪ್ರಾರ್ಥಿಸಿದನು.

ಇದನ್ನು ಕೇಳಿದೊಡನೆ ದೇವರೇ ಅವನ ಪತ್ನಿಯನ್ನು ಕರೆತಂದು ಬಿಟ್ಟಂತೆ ರಾಜ ಕುಮಾರಿಯು ತನ್ನ ಪ್ರಿಯನ ಬಳಿಗೆ ಓಡಿಬಂದು ನನ್ನ ಸರ್ವಾಪರಾಧವನ್ನೂ ಕ್ಷಮಿಸು ಎಂದು ನಮಸ್ಕರಿಸಿದಳು. ಅವಳನ್ನು ನೋಡಿ ಆಶ್ಚರ್ಯಯುಕ್ತನಾಗಿ ದೇವರನ್ನು ಮತ್ತೆ ಸ್ತೋತ್ರಮಾಡಿ ತನ್ನ ಸಹೋದರರಿದಿರಿಗೆ ಪರಮ ಸಂತೋಷದಿಂದ ಅವಳನ್ನು ಪಾಣಿಗ್ರಹಣ ಮಾಡಿದನು ಅವಳು ಒಡನೆಯೆ ನಡೆದ ವಿಚಾರವನ್ನೆಲ್ಲ ತಿಳಿಸಿ ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಮತ್ತೆ ಬೇಡಿಕೊಂಡಳು

ಗಂಧರ್ವ ರಾಜಕುಮಾರನು ಅವಳನ್ನು ಆದರಿಸಿ 'ಅದು ನಿನ್ನ ಅಪರಾಧ ವಲ್ಲ ಆ ಋಷಿಯ ಶಾಪವೇ ಹಾಗೆ ಇಂದು ನನಗೆ ಶಾಪ ವಿಮೋಚನೆ ಯಾದಂತಿದೆ, ಇನ್ನು ಮೇಲೆ ಸುಖವಾಗಿರಬಹುದು' ಎಂದನು

ರಾಜ ಕುಮಾರಿಯು ಮಂತ್ರಿಯೊಡನೆ ಈ ಶುಭವೃತ್ತಾಂತವನ್ನು ತಂದೆಗೆ ಹೇಳಿಕಳುಹಿಸಿದಳು ತರುವಾಯ ಬೇಡನಿಗೆ ಬೇಡಿದುದನ್ನೆಲ್ಲ ಕೊಟ್ಟು ಅವನ ಮನಸ್ಸನ್ನು ಸಂತೋಷಪಡಿಸಿದಳು. ಈ ವರ್ತಮಾನವನ್ನು ಕೇಳಿ ದೊರೆಯು ಪಟ್ಟಣವನ್ನೆಲ್ಲ ಅಲಂಕರಿಸಿ, ರಾಜಾಧಿರಾಜರಿಗೆಲ್ಲ ಹೇಳಿ ಕಳುಹಿಸಿ ಮಗಳನ್ನೂ ಅಳಿ ಯನನ್ನೂ ಬಹು ವಿಜೃಂಭಣೆಯಿಂದ ಕರೆತಂದು ಅವರಿಗೆ ತನ್ನ ರಾಜ್ಯದಲ್ಲಿ ಪಟ್ಟಾಭಿ ಷೇಕಮಾಡಿ, ಸುಖಿಯಾದನು

---

## ೫೨. ಕುರುಕ್ಷೇತ್ರ

ಕುರುಕ್ಷೇತ್ರವು ಭಯಂಕರವಾದ ಯುದ್ಧಭೂಮಿಯು ಇದು ಉತ್ತರ ಹಿಂದೂಸ್ಥಾನದಲ್ಲಿರುವುದು ಅಲ್ಲಿ ಪಾಂಡವರೂ ಕೌರವರೂ ಹದಿನೆಂಟು ದಿನಗಳು ಬಹಳ ಘೋರವಾಗಿ ಯುದ್ಧವನ್ನು ಮಾಡಿದರು ಅವರು ಚಂದ್ರವಂಶಕ್ಕೆ ಸೇರಿದ ರಾಜರು. ಅವರ ಸಹಾಯಕ್ಕಾಗಿ ಹಿಂದೂಸ್ಥಾನದ ಅನೇಕ ಮಂದಿ ರಾಜರುಗಳು ಸೇನಾಸಮೇತರಾಗಿ ಬಂದು ಕುರುಕ್ಷೇತ್ರದಲ್ಲಿ ವೀರಸ್ವರ್ಗವನ್ನೈದಿದರು

ಚಂದ್ರವಂಶದ ರಾಜನಾದ ಧೃತರಾಷ್ಟ್ರನು ಹಸ್ತಿನಾವತಿಗೆ ದೊರೆಯಾಗಿ ದ್ದನು. ಇವನು ಕುರುಡನು, ಆದುದರಿಂದ ಇವನ ತಮ್ಮನಾದ ಪಾಂಡು ರಾಯನು ರಾಜ್ಯಭಾರವನ್ನು ವಹಿಸಿದ್ದನು ಪಾಂಡುರಾಯನು ಕೆಲ ಕಾಲದ ಮೇಲೆ ಸ್ವರ್ಗಸ್ಥನಾದನು ಇವನಿಗೆ ಐದುಮಂದಿ ಮಕ್ಕಳು. ಇವರೇ ಪ್ರಸಿದ್ಧ ರಾದ ಧರ್ಮರಾಜ ಭೀಮ ಅರ್ಜುನ ನಕುಲ ಸಹದೇವರೆಂಬ ಪಂಚಪಾಂಡವರು ಪಾಂಡುರಾಯನ ತರುವಾಯ ಧೃತರಾಷ್ಟ್ರನು ಇವರನ್ನು ಸಾಕಿ ಸಲಹಿ, ಕೊನೆಗೆ ಐದು ಗ್ರಾಮಗಳನ್ನು ಇವರೈದು ಮಂದಿಗೂ ಕೊಟ್ಟು ಸುಖವಾಗಿ ರಾಜ್ಯಭಾರ ಮಾಡಿಕೊಂಡಿರುವಂತೆ ಹೇಳಿ ಕಳುಹಿಸಿದನು.

ಇತ್ತಲಾಗಿ ಹಸ್ತಿನಾವತಿಯನ್ನು ತನ್ನ ಮಗನಾದ ದುರ್ಯೋಧನನಿಗೆ ಕೊಟ್ಟನು ಇವನ ತಮ್ಮನೆ ದುಶ್ಶಾಸನನು. ಧೃತರಾಷ್ಟ್ರನಿಗೆ ದುರ್ಯೋದನ ದುಶ್ಶಾಸನರು ಸೇರಿ ಒಟ್ಟು ನೂರುಮಂದಿ ಗಂಡುಮಕ್ಕಳು. ಇವರೇ ಕೌರವರು ಇವರು

ಚಿಕ್ಕವರಾಗಿರುವಾಗಿನಿಂದಲೂ ಪಾಂಡವರನ್ನು ನೋಡಿ ಹೊಟ್ಟೆಗಿಚ್ಚು ಪಡುತ್ತಿದ್ದರು. ಭೀಮಾರ್ಜುನರನ್ನು ನೋಡಿದರೆ ದುರ್ಯೋಧನ ದುಶ್ಶಾಸನಾದಿಗಳಿಗೆ ಆಗುತ್ತಿರಲಿಲ್ಲ. ದೊಡ್ಡವರಾದ ಮೇಲೆ ಇವರು ಪಾಂಡವರನ್ನು ನಾಶಮಾಡಬೇಕೆಂದು ಎಷ್ಟೆಷ್ಟೋ ಉಪಾಯವನ್ನು ಮಾಡಿದರು ಏತರಿಂದಲೂ ಪಾಂಡವರಿಗೆ ಕೇಡುಂಟಾಗಲಿಲ್ಲ

ಹೀಗಿರುವಾಗ ಒಂದು ಉತ್ಸವಕಾಲದಲ್ಲಿ ಕೌರವರು ಬಂದು ಪಾಂಡವರ ವೈಭವವನ್ನು ನೋಡಿ ಬೆರಗಾದರು ಆಗ ಪಾಂಡವರನ್ನು ಹೇಗಾದರೂ ನಾಶಮಾಡಬೇಕೆಂದು ದುರ್ಯೋಧನನು ಧರ್ಮರಾಜನನ್ನು ಪಗಡೆಯಾಟಕ್ಕೆ ಕರೆದನು ಒಂದೊಂದು ಆಟಕ್ಕೂ ಪಣವನ್ನು ಇಟ್ಟು ಆಡಿದನು. ಆಟದಲ್ಲಿ ಧರ್ಮರಾಜನು ಎಲ್ಲವನ್ನೂ ಸೋತು ಕೊನೆಗೆ ತಮ್ಮಂದಿರೊಡನೆ ಕೂಡಿ ಹನ್ನೆರಡುವರ್ಷ ವನವಾಸವನ್ನೂ ಒಂದುವರ್ಷ ತಮ್ಮ ಗುರುತು ಯಾರಿಗೂ ತಿಳಿಯದಂತೆ ಅಜ್ಞಾತ ವಾಸವನ್ನೂ ಮಾಡುವೆನೆಂದು ಒಪ್ಪಿಕೊಂಡನು, ಅಯ್ಯೋ, ಜೂಜಾಟದಿಂದ ಅಂತಹ ಪಂಚ ಪಾಂಡವರ ಅವಸ್ಥೆ ಏನಾಯಿತು ನೋಡಿ, ವೀರ ಪುರುಷರನ್ನು ಮದುವೆಯಾದ ಆ ದ್ರೌಪದಿಗೆ ಎಂತಹ ಕಷ್ಟವು ಸಂಭವಿಸಿತು, ಕೇಳಿ, ಮಹಾ ಶೂರರಾದ ಪಂಚ ಪಾಂಡವರ ತಾಯಿ ಕುಂತಿಯ ದುಃಖವೆಷ್ಟೆಂದು ಹೇಳೋಣ

ಭೀಮಾರ್ಜುನರು ಎಂತಹ ಶೂರರಾಗಿದ್ದರೂ ಅಣ್ಣನಾದ ಧರ್ಮರಾಜನ ಮಾತಿಗೆ ಕಟ್ಟುಬಿದ್ದರು ಪಾಂಡವರಿಗೆ ಸಂಭವಿಸಿದ ಕಷ್ಟವೇ ತನ್ನ ಕಷ್ಟವೆಂದು ದ್ರೌಪದಿಯೂ ಅವರೊಡನೆ ಹೊರಟಳು ನಕುಲ ಸಹದೇವರು ಚಿಕ್ಕವರಾಗಿದ್ದರೂ ಅಣ್ಣನ ಮಾತೇ ಮಾತೆಂದು ಹಿಂದೆ ಹೊರಟರು. ಹನ್ನೆರಡು ವರ್ಷಕಾಲ ಕಾಡೆಲ್ಲ ಅಲೆದು ಬಹು ಶ್ರಮಬಿದ್ದು ಹದಿಮೂರನೆಯ ವರ್ಷ ತಮ್ಮ ರೂಪುಗಳನ್ನೆಲ್ಲ ಬೇರೆ ಬೇರೆ ಮಾಡಿಕೊಂಡು ವಿರಾಟರಾಯನ ಪಟ್ಟಣದಲ್ಲಿ ಒಂದು ವರ್ಷಕಾಲ ಯಾರಿಗೂ ತಿಳಿಯದಂತೆ ಕಳೆದು ತರುವಾಯ ಆಡಿದ ಮಾತಿನಮೇರೆ ತಮ್ಮ ರಾಜ್ಯವನ್ನು ತಮಗೆ ಕೊಡಬೇಕೆಂದು ದುರ್ಯೋಧನನ್ನು ಕೇಳಿದರು

ದುರ್ಯೋಧನನು ಬಲು ಬಲಶಾಲಿಯಾಗಿದ್ದುದರಿಂದಲೂ ಅವನಿಗೆ ಮಹಾ ಶೂರನಾದ ಕರ್ಣನ ಸಹಾಯವಿದ್ದುದರಿಂದಲೂ ಪಾಂಡವರಿಗೆ ಪಂಚಗ್ರಾಮವನ್ನು ಕೊಡಲಿಕ್ಕೆ ಒಪ್ಪಲಿಲ್ಲ ಆಗ ಎರಡು ಪಕ್ಷದವರಿಗೂ ಬೇಕಾದವನಾದ ಶ್ರೀ ಕೃಷ್ಣನು ಸಂಧಿಮಾಡಲಿಕ್ಕೆ ಹೂರಟನು ಅವನ ಯತ್ನವೂ ಸಾಗದಿರಲು ಪಾಂಡವರೂ ಕೌರವರೂ ಯುದ್ಧಕ್ಕೆ ಸಿದ್ಧರಾದರು ಈ ಯುದ್ಧವೇ ಆ ಕುರುಕ್ಷೇತ್ರದಲ್ಲಿ ನಡೆಯಿತು ಈ ಯುದ್ಧದಲ್ಲಿ ಅರ್ಜುನನ ಮಗ ಅಭಿಮನ್ಯುವೆಂಬ ಚಿಕ್ಕ ಹುಡುಗನು ಬಹಳ ಸಾಹಸವನ್ನು ತೋರಿಸಿದನೆಂದು ಕೊಂಡಾಡುವರು. ಕೊನೆಗೆ ಕೌರವರೆಲ್ಲರೂ ಸೋತು ಹೋದರು. ಪಾಂಡವರೇ ಗೆದ್ದರು ಧರ್ಮರಾಜನಿಗೆ ಪಟ್ಟಾಭಿಷೇಕವಾಯಿತು.

---

## ೫೩. ಶ್ರೀನಾಥ ಕವಿ

ಸುಮಾರು ಒಂಬೈನೂರು ವರ್ಷಗಳ ಕೆಳಗೆ ತೆಲಗು ದೇಶದಲ್ಲಿ ಶ್ರೀನಾಥನೆಂಬ ಕವಿಶ್ರೇಷ್ಠನೊಬ್ಬನು ಇದ್ದನು. ಆತನ ವಿದ್ಯೆಗೂ ಕವಿತಾಶಕ್ತಿಗೂ ಮೆಚ್ಚಿ ಆ ದೇಶದ ರಾಜನು ಬೇಕಾದ ಬಿರುದಾವಳಿಗಳನ್ನೂ ಭೂಮಿ ಕಾಣಿಯನ್ನೂ ಕೊಟ್ಟು ಆಸ್ಥಾನದಲ್ಲಿಟ್ಟುಕೊಂಡಿದ್ದನು. ಈ ಕವಿಶ್ರೇಷ್ಠನಿಗೆ ಒಬ್ಬಳು ತಂಗಿಯಿದ್ದಳು ಆಕೆಯು ಬೇರೆ ಊರಿನಲ್ಲಿ ಇದ್ದುದರಿಂದ ಶ್ರೀನಾಥನಿಗೆ ತಂಗಿಯನ್ನು ನೋಡಲು ಹತ್ತು ಹನ್ನೊಂದು ವರ್ಷಗಳಕಾಲ ಅವಕಾಶವೇ ದೊರೆಯಲಿಲ್ಲ ಹನ್ನೆರಡು ವರ್ಷ ಗಳಕಾಲ ತಂಗಿಯನ್ನು ನೋಡದಿದ್ದರೆ ಮುಂದೆ ನೋಡಲಿಕ್ಕೇ ಇಲ್ಲವೆಂಬ ಸಂಪ್ರದಾಯವನ್ನರಿತವನಾದುದರಿಂದ ರಾಜನ ಅಪ್ಪಣೆಯನ್ನು ಪಡೆದು ಪಾಲಕಿಯಲ್ಲಿ ಕುಳಿತು, ತಂಗಿಯನ್ನು ನೋಡಿಕೊಂಡು ಬರಲು ಹೊರಟು ತಂಗಿಯಿದ್ದೆಡೆಗೆ ಬಂದನು

ಅಣ್ಣನು ಬಂದುದನ್ನು ನೋಡಿ ಬಹು ಆದರದಿಂದ ಬರಮಾಡಿಕೊಂಡು, ತಾನೂ ತನ್ನ ಸೊಸೆಯೂ ನಮಸ್ಕಾರವನ್ನು ಮಾಡಿದರು. ಕ್ಷೇಮಲಾಭಗಳನ್ನು ವಿಚಾರಿಸಿದ ಮೇಲೆ ಭಾವಮೈದನೂ ಸೋದರಳಿಯನೂ ಎಲ್ಲಿಯೆಂದು ವಿಚಾರಿಸಲು ಹಿತ್ತಲಕಡೆ ಇರುವರೆಂದು ಸೊಸೆಯು ಹೇಳಿದಳು ಅವರನ್ನು ನೋಡಬೇಕೆಂದು ಶ್ರೀನಾಥನು ತಾನೇ ಹೊರಟನು ಅಲ್ಲಿ ಯಾರೂ ಕಾಣಬರಲಿಲ್ಲ ದೂರದಲ್ಲಿ ಎಲ್ಲೋ ಒಬ್ಬನು ನೇಗಿಲು ಹಿಡಿದು ಉಳುತ್ತಿದ್ದುದನ್ನೂ ಅವನ ಬಳಿಯಲ್ಲಿ ದನವನ್ನು ಅಟ್ಟುತ್ತ ಇನ್ನೊಬ್ಬನು ನಿಂತಿದ್ದುದನ್ನೂ ನೋಡಿ ಅವರು ಇರಲಾರರೆಂದು ತಿಳಿದು, ಒಳಕ್ಕೆ ಬಂದು ' ಅಲ್ಲಿ ಇಲ್ಲವಲ್ಲಾ ' ಎಂದನು ಸೊಸೆಯು ಮತ್ತೆಹೋಗಿ ನೋಡಿ ಬಂದು ಅಲ್ಲಿಯೇ ಇರುವರು ಎಂದಳು ಆಗ ಕವಿಯು ಏನು, ಹಾಗಾದರೆ ನೀವು ನೇಗಿಲನ್ನು ಹಿಡಿಯುವರೆ ಗೊಲ್ಲರೆ ? ಯಾವ ಮತದವರು ? ಎಂದು ಹಾಸ್ಯ ಮಾಡಿದನು

ವಿದ್ಯಾವತಿಯಾದ ಸೊಸೆಯು ಮಹಾ ವಿದ್ವಾಂಸನಾದ ಗಂಡನನ್ನೂ ವರ ಕವಿಯಾದ ತನ್ನ ಮಾವನನ್ನೂ ಅಪಹಾಸ್ಯಮಾಡಿದ ಆಸ್ಥಾನ ಕವಿಯನ್ನು ನೋಡಿ, ' ನಮ್ಮ ಮನೆಯವರು ವಿದ್ಯೆಯನ್ನು ಮಾರುವ ಮತದವರಲ್ಲ , ದಾನಮಾಡುವವರು, ಕಷ್ಟಪಟ್ಟು ಎದೆಯ ರಕ್ತವನ್ನು ಬಸಿದು ಸದ್ವೃತ್ತಿಯಲ್ಲಿ ಹಂಡಿರು ಮಕ್ಕಳನ್ನು ಸಾಕುವುದರಲ್ಲಿ ಅವಮಾನವನ್ನು ಎಣಿಸುವವರಲ್ಲ' ಎಂದು ಹೇಳಲು ಆಸ್ಥಾನಕವಿಯು ನಾಚಿಕೆಪಟ್ಟು ತಲೆವಾಗಿದನು

---

## ೫೪ ಕೊಲಂಬಸ್

ಈಗ ಸುಮಾರು ನಾನೂರೈವತ್ತು ವರ್ಷಗಳ ಕೆಳಗೆ ಭೂಮಿಯ ವಿಸ್ತಾರವು ಇಷ್ಟೆಂಬುದೇ ಜನರಿಗೆ ತಿಳಿದಿರಲಿಲ್ಲ. ಈಗ ಐಶ್ವರ್ಯಕ್ಕೂ ವ್ಯಾಪಾರಕ್ಕೂ, ವಿದ್ಯೆಗೂ ಪ್ರಸಿದ್ಧಿಗೊಂಡಿರುವ ಅಮೇರಿಕಾಖಂಡದ ಇರುವಿಕೆಯನ್ನೇ ಅರಿಯರು ಪಶ್ಚಿಮ

ದಿಕ್ಕಿನಲ್ಲಿ ದೊಡ್ಡ ಭೂಭಾಗವು ಇರಬೇಕೆಂದಾಲೋಚಿಸಿ, ಅದನ್ನು ಕಂಡುಹಿಡಿಯಲು ಪ್ರಯತ್ನಪಟ್ಟು ಸಾಧಿಸಿದವನೇ ಕೊಲಂಬಸ್ ಈ ಮಹಾ ಪುರುಷನ ಕಥೆಯನ್ನು ಹೇಳುವೆನು, ಕೇಳಿ

ಕೊಲಂಬಸ್ ಇಟಲಿ ದೇಶದವನು ಈತನ ತಂದೆಯು ಬಡವನು ಆದರೂ ಮಗನಿಗೆ ಬೇಕಾದ ವಿದ್ಯೆಯನ್ನು ಕಲಿಸಿದನು ಕೊಲಂಬಸ್ಸಿಗೆ ಚಿಕ್ಕಂದಿನಿಂದಲೂ ಸಮುದ್ರದ ಮೇಲೆ ಹಡಗಿನಲ್ಲಿ ಹೋಗುವುದೆಂದರೆ ಬಹು ಇಷ್ಟ ಆದುದರಿಂದ ಅವನು ಹಡಗನ್ನು ಸರಿಯಾಗಿ ನಡಿಸುವುದಕ್ಕೆ ಬೇಕಾದ ವಿದ್ಯೆಯನ್ನು ಚೆನ್ನಾಗಿ ಅಭ್ಯಾಸಮಾಡಿದನು ಇದಕ್ಕಾಗಿ ನಕ್ಷತ್ರಗಳ ಗುರುತನ್ನೂ ಅವು ಸಂಚಾರ ಮಾಡುವ ಮಾರ್ಗವನ್ನೂ ಚೆನ್ನಾಗಿ ತಿಳಿದುಕೊಂಡನು ತನಗೆ ಹದಿನಾರು ವರ್ಷ ತುಂಬುತ್ತಲೂ ಅವನು ಸಮುದ್ರದಮೇಲೆ ಸಂಚಾರಮಾಡಲು ಮೊದಲು ಮಾಡಿದನು. ಆಗ ದೇಶಸಂಚಾರ ಮಾಡಿದವರು ಬರೆದಿಟ್ಟ ಪುಸ್ತಕಗಳನ್ನೋದಿಯೂ, ನಾವಿಕರು ಹೇಳುತ್ತಿದ್ದ ವಿಚಿತ್ರಕಥೆಗಳನ್ನೆಲ್ಲ ಕೇಳಿಯೂ ಆಗಿನ ಕಾಲದಲ್ಲಿದ್ದ ಭೂಪಟಗಳನ್ನೆಲ್ಲ ಪರೀಕ್ಷಿಸಿಯೂ ಪಶ್ಚಿಮದಿಕ್ಕಿನಲ್ಲಿ ವಿಸ್ತಾರವಾದ ಇನ್ನೊಂದು ಭೂಭಾಗವಿದೆಯೆಂದು ಗೊತ್ತು ಮಾಡಿಕೊಂಡನು

ಆದರೆ ಅದನ್ನು ಕಂಡು ಹಿಡಿಯಲು ಹಡಗನ್ನು ಕಟ್ಟಿ ಜನ ಸಹಾಯವನ್ನು ಒದಗಿಸಿಕೊಂಡು ಹೋಗುವಷ್ಟು ಹಣವು ಕೊಲಂಬಸ್ಸಿಗೆ ಇರಲಿಲ್ಲ ಈಗ ತನ್ನ ಅಣ್ಣನಿಂದ ಪೋರ್ಚುಗಲ್ ಎಂಬ ದೇಶಕ್ಕೆ ಹೋಗಿ ಅಲ್ಲಿ ಐಶ್ವರ್ಯವಂತನಾದ ಒಬ್ಬ ನಾವಿಕನ ಮಗಳನ್ನು ಮದುವೆಯಾಗಿ ಪಶ್ಚಿಮದಿಕ್ಕಿನ ಭೂಭಾಗವನ್ನು ಕಂಡುಹಿಡಿಯಲು ಹೊರಡಬೇಕೆಂಬ ಪ್ರಯತ್ನದಲ್ಲಿದ್ದನು ಇಷ್ಟರಲ್ಲಿಯೇ ಅವನ ಹಂಡತಿ ಸತ್ತುಹೋದಳು ಮಾವನ ಸಹಾಯವು ತಪ್ಪಿತು ಮುಂದೆ ಏನು ಮಾಡಬೇಕು? ಹಾಗೆಯೇ ಚಿಂತಿಸಿ ಪೋರ್ಚುಗಲ್ ದೇಶದ ದೊರೆಯ ಸಹಾಯವನ್ನು ಪಡೆಯಬೇಕೆಂದು ರಾಜನಲ್ಲಿಗೆ ಹೋಗಿ ತನ್ನ ವಿಚಾರವನ್ನೆಲ್ಲ ತಿಳಿಸಿದನು. ಇವನು ಹೇಳುವುದನ್ನೆಲ್ಲ ಕೇಳಿ ದೊರೆಯೂ ಅವನ ಮಂತ್ರಿಗಳೂ ಗಟ್ಟಿಯಾಗಿ ನಕ್ಕುಬಿಟ್ಟರು ಆಗ ಖಿನ್ನಮನಸ್ಕನಾಗಿ ಮನೆಗೆ ಬಂದು ಬಹಳವಾಗಿ ಚಿಂತಿಸಿ ತನ್ನ ಅಣ್ಣನನ್ನು ಕರೆದು—ಅಣ್ಣ ! ಇಂಗ್ಲೆಂಡ್ ದೇಶವನ್ನು ಆಳುತ್ತಿರುವ ಹನ್ರಿಯು ನಾವಿಕರಿಗೆ ಸಹಾಯ ಮಾಡುವನಂತೆ ನಾನಂತೂ ಪುಣ್ಯಹೀನನು ನೀನಾದರೂ ಹೋಗಿ ನಾನು ಕಂಡು ಹಿಡಿದಿರುವ ವಿಚಾರವನ್ನೆಲ್ಲ ಆ ರಾಜನಿಗೆ ತಿಳಿಸಿ ಆತನ ಸಹಾಯವನ್ನಾದರೂ ಪಡೆಯುವ ಪ್ರಯತ್ನವನ್ನು ಮಾಡು, ಎಂದನು.

ಈ ಸಲಹಗೆ ಅಣ್ಣನು ಒಪ್ಪಿ ಹೊರಟನು ಆದರೆ ಕೊಲಂಬಸ್ಸಿನ ಅದೃಷ್ಟ ಎಂತಹ ದುರದೃಷ್ಟ ! ಕೊಲಂಬಸ್ಸಿನ ಅಣ್ಣನಮೇಲೆ ಕಡಲ್ಗಳ್ಳರು ಬಿದ್ದು ಅವನನ್ನು ಹಿಡಿದುಕೊಂಡು ಹೊರಟು ಹೋದರು ಅವನು ಇಂಗ್ಲೆಂಡ್ ದೇಶದ ರಾಜನನ್ನೂ ನೋಡಲಿಲ್ಲ, ಕೊಲಂಬಸ್ಸಿಗೆ ಸಹಾಯವನ್ನೂ ಕೊಡಲಿಲ್ಲ ಇದಾದ ಮೇಲೆ ಕೊಲಂಬಸ್ಸನು ಬಹುದಿನಗಳು ಕೊರಗಿ ಕೊನೆಗೆ ಪೋರ್ಚುಗಲ್ ದೇಶದಿಂದ ಬಹು

ಶ್ರಮಬಿದ್ದು ಸ್ಪೇನ್ ದೇಶದ ರಾಜಧಾನಿಯನ್ನು ಸೇರಿ ಅಲ್ಲಿಯ ರಾಜನನ್ನೂ ಅವನ ರಾಣಿಯನ್ನೂ ಆಶ್ರಯಿಸಿದನು ಅವರು ಇವನ ವಿಚಾರವನ್ನೆಲ್ಲ ಕೇಳಿ, ಪಶ್ಚಿಮ ದಿಕ್ಕಿನಲ್ಲೂ ಭೂಮಿ ಇದ್ದರೂ ಇರಬಹುದೆಂದು ನಂಬಿ ಏಳು ವರ್ಷಗಳ ಕಾಲ ಕೊಲಂಬಸ್ ಕಾದಿದ್ದರಮೇಲೆ ಅವನಿಗೆ ಸಹಾಯ ಮಾಡುವುದಾಗಿ ಒಪ್ಪಿಕೊಂಡರು

ಕೊನೆಗೆ ೧೪೯೨ ನೆಯ ಇಸವಿಯಲ್ಲಿ ಕೊಲಂಬಸ್ಸನು ಮೂರು ಹಡಗುಗಳನ್ನೂ ನೂರಿಪ್ಪತ್ತು ಮಂದಿ ನಾವಿಕರನ್ನೂ ತೆಗೆದುಕೊಂಡು ಪಶ್ಚಿಮದಿಕ್ಕಿನಲ್ಲಿರುವ ಭೂಭಾಗವನ್ನು ಕಂಡುಹಿಡಿಯಲು ಹೊರಟನು ಆಃ! ಅಂದು ಕೊಲಂಬಸ್ ಪಟ್ಟ ಸಂತೋಷವನ್ನು ಬಣ್ಣಿಸುವುದು ನಮ್ಮಿಂದ ಸಾಧ್ಯವೇ! ಎಷ್ಟು ವರ್ಷಕಾಲ ಅವನು ಕಾದುದು! ಎಷ್ಟು ಕಡೆ ಅವನು ಪ್ರಯತ್ನ ಮಾಡಿದುದು! ಎಷ್ಟುಸಲ ಅವನು ಭಗ್ನಮನೋರಥನಾದುದು! ತನ್ನ ಜೀವದ ಉದ್ದೇಶವನ್ನು ತೀರಿಸಲು ಹೊರಟ ದಿನ ಕೊಲಂಬಸ್ಸನು ಎಷ್ಟು ಸಂತೋಷಪಟ್ಟಿರಬಹುದು! ಎಷ್ಟು ಉಲ್ಲಾಸದಿಂದ ಅವನು ಹೊರಟಿರಬಹುದು!

ಕೊಲಂಬಸ್ ಕೊನೆಗೆ ಹೊರಟನು ಹೊರಡುವುದಕ್ಕೆ ಮುಂದೆ ಅವನು ಒಂದು ಒಪ್ಪಂದವನ್ನು ಮಾಡಿ ಕೊಡಬೇಕಾಯಿತು ಪಶ್ಚಿಮದಿಕ್ಕಿನಲ್ಲಿ ಭೂಭಾಗವು ಅವನು ಹೇಳಿದಂತೆ ಸಿಕ್ಕಿದರೆ ಅದನ್ನು ರಾಜನಿಗಾಗಿ ಆಳುವ ಅಧಿಕಾರವು ಕೊಲಂಬಸ್ಸಿಗೆ ಸೇರಿದುದೆಂದೂ ಆ ದೇಶದ ಹುಟ್ಟುವಳಿಯಲ್ಲಿ ಹತ್ತರಲ್ಲಿ ಒಂದು ಭಾಗವನ್ನು ಅವನು ವಂಶಪಾರಂಪರ್ಯವಾಗಿ ಅನುಭವಿಸಬಹುದೆಂದೂ ಒಂದುವೇಳೆ ಯಾವ ದೇಶವೂ ಸಿಕ್ಕದಿದ್ದರೆ ತನಗೆ ಮೂರು ಕಾಸನ್ನೂ ಕೂಡ ಕೊಡತಕ್ಕುದಿಲ್ಲವೆಂದೂ ರಾಜನೊಡನೆ ಒಪ್ಪಂದ ಮಾಡಿಕೊಂಡನು ಇಷ್ಟಾದಮೇಲೆ ಹೊರಟು ಎರಡು ತಿಂಗಳ ಕಾಲ ಎಲ್ಲಿಯೂ ನಿಲ್ಲಲು ಅವಕಾಶವೇ ಇಲ್ಲದೆ ಸಮುದ್ರದ ಮೇಲೆ ಒಂದೇ ಸಮನಾಗಿ ಹೋದುದಾಯಿತು ಸುತ್ತುಮುತ್ತಲೂ ಅಪಾರವಾದ ಸಮುದ್ರ ಕಾಣುತ್ತಿದ್ದಿತೇ ಹೊರತು ಭೂಮಿಯ ಗುರುತೇ ಕಾಣಲಿಲ್ಲ ಕೊಲಂಬಸ್ಸಿನೊಡನೆ ಇದ್ದವರಿಗೆಲ್ಲ ಭಯವು ಹೆಚ್ಚುತ್ತ ಬಂದಿತು ಕೊಲಂಬಸ್ಸನು ಎಷ್ಟು ವಿಧವಾಗಿ ಹೇಳಿಕೊಂಡರೂ ಮುಂದೆ ಹೋಗಲು ಒಪ್ಪರು ಕೆಲವರು ಮುರಾಡ ಹಾಕಿಕೊಂಡರು ಕೆಲವರು ಕೊಲಂಬಸನನ್ನು ಕೊಂದು ಸಮುದ್ರದಲ್ಲಿ ಎಸೆದು ಹಿಂದಿರುಗೋಣವೆಂದಾಲೋಚಿಸಿದರು ಅಷ್ಟು ದಿನದಿಂದಲೂ ಮಾಡಿದ ಪ್ರಯತ್ನವೆಲ್ಲ ಸ್ವಲ್ಪದರಲ್ಲಿಯೇ ಹಾಳಾಗುವ ಸಮಯವು ಬಂದೊದಗಿತು

ಆಗ ಕೊಲಂಬಸನು ಏನುಮಾಡಲೂ ತೋರದೆ ನಯ ಭಯದಿಂದ ಎಲ್ಲರನ್ನೂ ಸ್ವಾಧೀನಪಡಿಸಿಕೊಳ್ಳಲೂ ಸಾಧ್ಯವಾಗದೆ,—ಇನ್ನು ಮೂರು ದಿನಗಳು ಸೈರಿಸಿ, ಅಷ್ಟರೊಳಗಾಗಿ ಭೂಮಿಯು ಸಿಕ್ಕದಿದ್ದರೆ ಆಮೇಲೆ ನಿಮ್ಮಿಷ್ಟಬಂದಂತೆ ಮಾಡಿ— ಎಂದು ಬೇಡಿಕೊಂಡನು. ಅದಕ್ಕೆ ಹಾಗೂ ಹೀಗೂ ಒಪ್ಪಿದರು ಒಂದು ದಿನವಾಯಿತು, ಭೂಮಿಯ ಗುರುತೇ ಇಲ್ಲ ಆಗ ಕೊಲಂಬಸ್ಸಿನ ಮನಸ್ಸಿನ ಸ್ಥಿತಿಯು ಹೇಗಿರಬೇಕು ? ದೇವರೇ ಗತಿಯೆಂದು ದೇವರನ್ನೇ ಧ್ಯಾನಿಸುತ್ತಿದ್ದನು ಎರಡನೆಯ

ದಿನ ಸಮುದ್ರದಲ್ಲಿ ಏನೇನೋ ಬರೆದಂತಿದ್ದ ಹಲಗೆಗಳೂ ನದಿಯ ದಡದ ಮೇಲೆ ಬೆಳೆಯುವ ಜೊಂಡುಗಳೂ ಕಾಯಿಗೊಂಚಲುಳ್ಳ ಮರದ ಕೊಂಬೆಗಳೂ ತೇಲಾಡು ತಿದ್ದುದು ಕಾಣಬಂದುವು ಆಗ ಸ್ವಲ್ಪ ಧೈರ್ಯ ಬಂದಿತು. ಆಗ ಮತ್ತೆ ನಯ ಭಯದಿಂದ ಎಲ್ಲರನ್ನೂ ಕೊಲಂಬಸನು ಸ್ವಾಧೀನಕ್ಕೆ ತೆಗೆದುಕೊಂಡು ಮುಂದೆ ಮುಂದೆ ಹೊರಡಲು ಮುಂದೆ ಮೂರು ದಿನದಲ್ಲೆ ಭೂಮಿಯು ಸಿಕ್ಕಿತು ಆಗ ಕೊಲಂಬಸನು ತನ್ನ ಜನರೊಡನೆ ಗೆಡ್ಡೆಯನ್ನು ಸೇರಿ ದೇವರನ್ನು ಪ್ರಾರ್ಥಿಸಿದನು ಅಲ್ಲಲ್ಲಿದ್ದ ದ್ವೀಪಗಳನ್ನು ನೋಡಿಕೊಂಡು ಹಿಂದಿರುಗಿದನು ಆಸ್ಥಾನದಲ್ಲಿ ಅವನಿಗೆ ಬಹಳ ಮರ್ಯಾದೆಯಾಯಿತು ಆದರೆ ಬಹುಕಾಲ ಇದು ನಡೆಯಲಿಲ್ಲ. ಇವನ ಶತ್ರುಗಳು ಇವನಿಗೆ ಬಹಳ ತೊಂದರೆಯನ್ನು ಕೊಟ್ಟರು ದೊಡ್ಡ ಭೂಭಾಗವನ್ನು ಕಂಡು ಹಿಡಿದ ಈ ಕೊಲಂಬಸ್ಸನು ಬಡತನದಲ್ಲಿ ಪ್ರಾಣವನ್ನು ಬಿಟ್ಟನು. ಸತ್ತ ಮೇಲೆ ಇವನನ್ನು ಬಹಳ ಕೊಂಡಾಡಿದರು

---

## ೫೫. ಹಾವು

ಒಂದು ದಿನ ಬೆಳಗಾಗುತ್ತಲೆ ತಂದೆ ಮಕ್ಕಳಿಬ್ಬರು ಒಂದು ತೋಟದಲ್ಲಿ ತಿರುಗಾಡುತ್ತಿದ್ದರು ಅಲ್ಲಿ ಬೇಲಿಯ ಒತ್ತಿನಲ್ಲಿ ಒಂದು ಹಣ್ಣು ಬಿದ್ದಿದ್ದುದನ್ನು ಮಗನು ನೋಡಿ ಅದನ್ನು ತರಲು ಬೇಲಿಯ ಹತ್ತಿರಕ್ಕೆ ಓಡಿದನು ತಂದೆಯು ಮಗನನ್ನು ಕೂಗಿ, ಕೂಗಿ 'ಮಗು ಬೇಲಿಯಲ್ಲಿ ಹಾವು ಸೇರಿರುತ್ತದೆ, ಅಲ್ಲಿಗೆ ಹೋಗಬೇಡ' ಎಂದನು ಆಗ—

ಮಗ—ಹಾವು ಹೇಗಿರುತ್ತದೆ? ನಾನು ನೋಡೇ ಇಲ್ಲ

ತಂದೆ—ಏನು! ಹಾವನ್ನೇ ನೋಡಿಲ್ಲವೆ?

ಮಗ—ಹಾವು, ಹಾವು ಎಂಬುದನ್ನು ಕೇಳಿದ್ದೇನೆಯೇ ಹೊರತು ಹಾವು ಹೇಗೆ ಇದೆ ಎಂಬುದನ್ನು ನಾನು ಕಾಣೆನು

ತಂದೆ—ಒಳ್ಳೆಯದು, ಹಾಗಾದರೆ ನನ್ನೊಡನೆ ಬಾ, ನಾನು ಒಂದು ಹಾವನ್ನು ತೋರಿಸುತ್ತೇನೆ

ಹೀಗೆಂದು ತಂದೆ ಮಕ್ಕಳಿಬ್ಬರೂ ಮಾತನಾಡಿಕೊಂಡು ಹೋಗುತ್ತಿರುವಾಗ ದಾರಿಯಲ್ಲಿ ಹಾವಿನ ಬುಟ್ಟಿಗಳನ್ನು ಒಂದು ಅಡ್ಡೆಗೆ ತಗುಲುಹಾಕಿ ಅಡ್ಡೆಯನ್ನು ಹೆಗಲಮೇಲೆ ಹೊತ್ತುಕೊಂಡು ಬರುತಿದ್ದ ಒಬ್ಬ ಹಾವಾಡಿಗನನ್ನು ನೋಡಿದರು ಆಗ ತಂದೆಯು ಹಾವಾಡಿಗನನ್ನು ಮಗನಿಗೆ ತೋರಿಸಿ-ಇವನು ಹಾವನ್ನು ಹಿಡಿದು ಸಾಕಿ ಆಡಿಸುತ್ತಾನೆ ಹಾವನ್ನು ಆಡಿಸುವುದರಿಂದ ಇವನಿಗೆ ಹಾವಾಡಿಗನೆಂದು ಹೆಸರು ಇವನಲ್ಲಿ ಹಾವುಗಳು ಇವೆ ಅವನ್ನು ಈಗ ನಿನಗೆ ತೋರಿಸುವಂತೆ ಹೇಳುವೆನು,—ಎಂದು ಹಾವಾಡಿಗನನ್ನು ಕರೆದು ಅವನಿಗೆ ಹಾವುಗಳನ್ನೆಲ್ಲ ತೋರಿಸಿ ಆಡಿಸು ಎಂದನು ಹಾವಾಡಿಗನು ಅಲ್ಲಿಯೇ ಅಡ್ಡೆಯನ್ನು ಇಳಿಸಿ ಅಡ್ಡೆಯ ಎರಡು

ಪಕ್ಕಗಳಲ್ಲೂ ಇದ್ದ ಬುಟ್ಟಿಗಳನ್ನು ತೆಗೆದು ಇಟ್ಟು ಅಲ್ಲಿ ಒಂದು ಬುಟ್ಟಿಯ ಮೇಲಿದ್ದ ನಾಗಸರವನ್ನು ತೆಗೆದುಕೊಂಡು, ಬುಟ್ಟಿಯ ಮುಚ್ಚಳವನ್ನು ಸ್ವಲ್ಪ ಓರೆಮಾಡಿ, ನಾಗಸರವನ್ನು 'ಫೀ' ಎಂದು ಊದುತ್ತ ತಲೆಯನ್ನು ತೂಗುತ್ತ, ತನ್ನ ಕಾಲಿನಲ್ಲಿದ್ದ ಗಗ್ಗರವನ್ನು ಶಬ್ದಮಾಡುತ್ತ, 'ನಾಗಪ್ಪಾ, ನಾಗರಾಜ, ಬನ್ನಿ ಸಾಮಿ ಬನ್ನಿ' ಎಂದು ಹಾವನ್ನು ಕೈಯಿಂದ ಸ್ವಲ್ಪ ಎಚ್ಚರಿಸಿದನು ಆಗ ಬುಟ್ಟಿಯೊಳಗಿನಿಂದ ಹಾವು ಹೊರಕ್ಕೆ ಬಂದಿತು ಮಗನು ಹಾವನ್ನು ನೋಡಿ 'ಓಹೊ! ಹಾವು! ಹಾವು ಇದೇನು ಉದ್ದಕ್ಕೆ ಇದೆ?' ಎಂದನು

ತಂದೆ—ಅದನ್ನು ಚೆನ್ನಾಗಿ ನೋಡಿ, ಅದಕ್ಕೆ ಕಾಲು, ಕೈ, ಏನಾದರೂ ಇದೆಯೋ ಹೇಳು

ಮಗ—ಎಲ್ಲಿ? ಅದು ಚೆನ್ನಾಗಿ ಕಾಣುವುದಿಲ್ಲವಲ್ಲ

ತಂದೆ—(ಹಾವಾಡಿಗನನ್ನು ಕುರಿತು) ಆ ಹಾವನ್ನು ಎತ್ತಿ ಹಿಡಿದುಕೊ.

ಮಗ—ಕೈ, ಕಾಲು ಏನೂ ಇಲ್ಲ ರೆಕ್ಕೆಯೂ ಕಾಣುವುದಿಲ್ಲ ಇದು ಸರಸರನೆ ಹೇಗೆ ಹೋಗುತ್ತದೆ? ಇದಕ್ಕೆ ರೆಕ್ಕೆಗಳೇನಾದರೂ ಇವೆಯೇ?

ತಂದೆ—ಇದಕ್ಕೆ ರೆಕ್ಕೆಗಳೂ ಇಲ್ಲ, ಕೈಕಾಲುಗಳೂ ಇಲ್ಲ, ನಮಗೂ ನಾಯಿ, ನರಿ, ಬೆಕ್ಕು, ಹಸು, ಕರು, ಇವುಗಳಿಗೂ ಇರುವಂತೆ ಹಾವಿಗೂ ಉದ್ದವಾದ ಬೆನ್ನು ಮೂಳೆ ಇರುವುದು ಬೆನ್ನು ಮೂಳೆಯು ಉದ್ದವಾದ ಒಂದೇ ಮೂಳೆಯಲ್ಲ, ಒಂದೇ ತೆರನಾದ ಸಣ್ಣಸಣ್ಣ ಮೂಳೆಗಳ ಸಾಲು ಇವುಗಳಿಗೆ ಸೇರಿಕೊಂಡು ಸಣ್ಣಾಗೆ ತೆಳ್ಳಗಿರುವ ಮಗ್ಗುಲ ಎಲುಬುಗಳಿವೆ ಇದೇ ನಿನ್ನ ಬೆನ್ನ ಮೂಳೆ, ಇವೇ ಮಗ್ಗುಲ ಎಲುಬುಗಳು ಎಂದು ತೋರಿಸಿ ಈ ಮಗ್ಗುಲ ಎಲುಬುಗಳ ಸಹಾಯದಿಂದಲೆ ಹಾವು ಅಷ್ಟು ಬೇಗಬೇಗ ಹೋಗುವುದು ಹಾವು ತನ್ನ ಎಲುಬುಗಳನ್ನು ಉಪಯೋಗಿಸುವಂತೆ ನಾವು ನಮ್ಮ ಮಗ್ಗುಲ ಎಲುಬುಗಳನ್ನು ಉಪಯೋಗಿಸಲು ಆಗುವುದಿಲ್ಲ ಆದರೆ ಕಣ್ಣುಗಳನ್ನು ನೋಡು ಎಷ್ಟು ಥಳಥಳಿಸುತ್ತಿವೆ ಅದಕ್ಕೆ ಕಿವಿ ಇದೆಯೇ ನೋಡು

ಮಗ—ಕಿವಿ ಇರುವಂತೆಯೇ ಕಾಣುವುದಿಲ್ಲವಲ್ಲ

ತಂದೆ—ಅಹುದು ಕಿವಿಯು ಮುಚ್ಚಿಹೋಗಿದೆ ಹಾವಿಗೆ ಚನ್ನಾಗಿ ಕಿವಿಯು ಕೇಳಿಸಲಾರದು ಆದರೆ ಜನರೆಲ್ಲರೂ ಹಾವಿಗೆ ಕಿವಿ ಇಲ್ಲದಿದ್ದರೂ ಬಹುಬೇಗ ಚೆನ್ನಾಗಿ ಕೇಳುತ್ತದೆ ಎಂದು ತಿಳಿದಿರುವರು

ಮಗ—ಅಪ್ಪ! ಇದು ಏನನ್ನು ತಿನ್ನುತ್ತದೆ?

ತಂದೆ—ಇದು ಕಪ್ಪೆ, ಸುಂಡ ಇಲಿ, ಮುಂತಾದ ಸಣ್ಣಸಣ್ಣ ಪ್ರಾಣಿಗಳನ್ನೂ ಹಕ್ಕಿಗಳ ಮೊಟ್ಟೆಗಳನ್ನೂ ನುಂಗುತ್ತದೆ, ಹಾಲನ್ನು ಕುಡಿಯುತ್ತದೆ

ಮಗ—ಕಪ್ಪೆ ಮುಂತಾದುದನ್ನು ನುಂಗುತ್ತದೆ. ಎನ್ನುತ್ತೀಯೆ? ಏಕೆ? ನಮ್ಮ ಹಾಗೆ ತಿಂಡಿಯನ್ನು ಅಗಿದು ತಿನ್ನುವುದಿಲ್ಲವೆ?

ತಂದೆ—ಇಲ್ಲ. ಹಲ್ಲುಗಳಿಂದ ನಮ್ಮ ಹಾಗೆ ಅಗಿದು ತಿಂಡಿಯನ್ನು ತಿನ್ನುವುದಿಲ್ಲ. ಹಾಗೆಯೇ ನುಂಗಿಬಿಡುತ್ತದೆ

ಮಗ—ಅದೇನು ಅದು ! ಹಲ್ಲೆ ?

ತಂದೆ—ಯಾವುದು ? ಕಪ್ಪಗೆ ಬಳುಕುತಿರುವುದೇ ? ಅದರ ನಾಲಗೆ

ಮಗ—ನಾಲಗೆಯೆ ? ಎರಡೆ ?

ತಂದೆ—ಎರಡು ನಾಲಗೆಗಳಿಲ್ಲ , ಒಂದು ನಾಲಗೆಯೇ ತುದಿಯಲ್ಲಿ ಎರಡಾಗಿ ಸೀಳಿದೆ

ಮಗ—ಹಾವು ಕಚ್ಚಿದರೆ ಸಾಯುತ್ತಾರಂತಲ್ಲಾ ! ನಿಜವೆ ?

ತಂದೆ—ಅಹುದು , ಒಂದು ತೆರದ ಹಾವು ಕಚ್ಚಿದರೆ ಸಾಯುವರು. ಇನ್ನೊಂದು ತೆರದ ಹಾವು ಕಚ್ಚಿದರೆ ಮೈಯೆಲ್ಲ ಗಂಟುಗಂಟಾಗುವುದು. ಮತ್ತೊಂದು ತೆರನಾದ ಹಾವು ಕಚ್ಚಿದರೆ ಮೈ ಕೊಳೆಯುವುದು , ಕೆಲವು ತೆರದ ಹಾವು ಕಚ್ಚಿದರೆ ಸಾಯುವುದಿಲ್ಲ

ಮಗ—ಹಾವಿಗೆ ಎಷ್ಟು ಹಲ್ಲಿವೆ ? ಕೈಯನ್ನು ಕಚ್ಚಿದರೆ ಕೈ ಕತ್ತರಿಸಿ ಬಿದ್ದು ಹೋಗುತ್ತದೆಯೇ ?

ತಂದೆ—(ಹಾವಾಡಿಗನನ್ನು ಕರೆದು, ಹಾವಿನ ಬಾಯಿಯನ್ನು ಬಿಡಿಸುವಂತೆ ಹೇಳಿ) ಅಲ್ಲಿ ನೋಡು ಸಾಲಾಗಿರುವ ಸಣ್ಣಸಣ್ಣ ಹಲ್ಲುಗಳು ಅವುಗಳಿಂದ ಕಚ್ಚಿದರೆ ಸಾಯುವುದಿಲ್ಲ ಈ ಹಾವಿನಲ್ಲಿ ವಿಷದ ಹಲ್ಲುಗಳು ಎರಡೂ ಇಲ್ಲ ಅವು ಮೇಲುಭಾಗದಲ್ಲಿ ಕೊಕ್ಕೆಯಹಾಗೆ ಮೊನಚಾಗಿ ಟೊಳ್ಳಾಗಿರುವುವು ಅವುಗಳ ಬುಡದಲ್ಲಿ ವಿಷದ ಚೀಲವಿರುವುದು ಆ ಚೀಲದಲ್ಲಿರುವ ವಿಷವು ಟೊಳ್ಳಾದ ಆ ಹಲ್ಲುಗಳಿಗೆ ಸುರಿಯುವುದು ಹಾವು ಕಚ್ಚಿದೊಡನೆಯೆ ಈ ಮೊನಚಾದ ಹಲ್ಲುಗಳನ್ನು ಮನುಷ್ಯನ ಶರೀರದಲ್ಲಿ ಊರಿ ವಿಷದ ತೊಟ್ಟನ್ನು ಮನುಷ್ಯನ ರಕ್ತಕ್ಕೆ ಸೇರಿಸುವುದು. ಅದರಿಂದ ಮನುಷ್ಯನು ಸಾಯುವನು.

ಮಗ—ಅಯ್ಯೋ ! ಪಾಪ ಹಾವು ಕಚ್ಚಿದರೆ ಬದುಕುವ ಮಾರ್ಗವೇ ಇಲ್ಲವೆ ?

ತಂದೆ—ಔಷಧಗಳನ್ನು ಹಾಕುತ್ತಾರೆ, ಮಂತ್ರಗಳನ್ನು ಹಾಕುತ್ತಾರೆ. ಏನೇನೋ ಮಾಡುತ್ತಾರೆ ವಿಷ ಚೆನ್ನಾಗಿ ರಕ್ತದಲ್ಲಿ ಸೇರಿದರೆ ಬದುಕುವುದು ಕಷ್ಟ ಒಂದು ಉಪಾಯ ಮಾಡಬಹುದು. ಹಾವು ಕಚ್ಚಿದಕೂಡಲೆ ಮನಸ್ಸನ್ನು ಗಟ್ಟಿಮಾಡಿಕೊಂಡು ಗಾಯದ ಸುತ್ತಲೂ ಸ್ವಲ್ಪ ಮಾಂಸವನ್ನು ಚೂರಿಯಿಂದ ಒಡನೆಯೇ ಕತ್ತರಿಸಿಹಾಕಿ ಕೆಂಪಗೆ ಕಾದಿರುವ ಕಬ್ಬಿಣದ ಸಲಾಕಿಯಿಂದ ಆ ಸ್ಥಳವನ್ನು ಸುಟ್ಟರೆ ಬದುಕಿಕೊಳ್ಳಬಹುದು

ಮಗ—ಬಹು ಕಷ್ಟ ನಾನು ಹಾವಿದ್ದೆಡೆಗಾಗಲಿ ಅದರ ಗೋಜಿಗಾಗಲಿ ಹೋಗುವುದಿಲ್ಲ

ತಂದೆ—ಎಲ್ಲಿ ? ನಿನ್ನಲ್ಲಿ ಯಾವ ಯಾವ ತೆರದ ಹಾವು ಇದೆ ? ತೋರಿಸು

ಹಾವಾಡಿಗ-ಬಹು ಚಟುವಟಿಕೆಯಾಗಿ ಎಲೆ ಹಸುರಿನಂತೆ ಇರುವ ಇದು, ಹಸುರು

ಹಾವು ಹೆಡೆಯುಳ್ಳ ಇದು ನಾಗರ ಹಾವು ಇದು ಕಚ್ಚಿದರೆ ಬದುಕುವುದೇ ಕಷ್ಟ. (ಪೀ, ಎಂದು ಮತ್ತೆ ಊದಿ) ಇನ್ನೊಂದು ಹಾವನ್ನು ತೆಗೆದು ಸ್ವಾಮಿ, ಇದು ಕೇರೇಹಾವು ನಾಗರ ಹಾವೂ ಕೇರೇ ಹಾವೂ ಬಹು ಚೆನ್ನಾಗಿ ಜಗಳ ವಾಡುತ್ತವೆ ಎನ್ನುತ್ತಾರೆ, ಇದು ಸ್ವಾಮಿ, ನೀರ ಹಾವು ಹೊಳೆಯಲ್ಲಿಯೂ ಕೊಳದಲ್ಲಿಯೂ ಇರುತ್ತದೆ ಇದು ನೋಡಿ ಬುದ್ಧಿ ಇದು ಹೆಬ್ಬಾವು, ದಾಸರ ಹಾವು, ಅಜಗರ, ಸಾಮಿ ಅಜಗರ, ಏಳೋ ರಾಜ—ಪೀ, ಎಂದು ಮತ್ತೆ ಊದಿದನು

ಮಗ—ಆ ಬುಟ್ಟಿಯ ಮೇಲೆ ಇರುವುದೇನು ?

ಹಾವಾಡಿಗ—ಅದು ಮುಂಗಸಿ, ಹಾವಿಗೆ ಶತ್ರು ಬುದ್ಧಿ ಅದು ಹಾವನ್ನು ಕತ್ತರಿಸಿಬಿಡುತ್ತದೆ

ತಂದೆ—ಎಲ್ಲಿ ಮಗು ಅವನಿಗೇನಾದರೂ ಕೊಡು, ಅವನು ನಿನಗೆ ಹಾವುಗಳ ನ್ನೆಲ್ಲ ತೋರಿಸಿದ್ದಾನೆ (ಮಗುವು ದುಡ್ಡನ್ನು ಕೊಡಲು) ಇನ್ನು ಹೊತ್ತಾಯಿತು, ಹೋಗೋಣ ನಡೆ, ಎಂದು ಎಲ್ಲರೂ ಹೊರಟು ಹೋಗುವರು

---

## ೫೬. ಬೆಟ್ಟದ ನಾಯಿ

ಯೂರೋಪ್ ಖಂಡದಲ್ಲಿ ಆಲ್ಪ್ಸ್ ಎಂಬ ಒಂದು ಪರ್ವತ ಶ್ರೇಣಿ ಇರುವುದು ಇಟಲಿ ದೇಶದಿಂದ ಫ್ರಾನ್ಸ್‌ದೇಶಕ್ಕೆ ಹೋಗಬೇಕಾದರೆ ಈ ಬೆಟ್ಟದ ಸಾಲನ್ನು ದಾಟಿಹೋಗಬೇಕು. ಮೊನ್ನೆ ಮೊನ್ನೆಯವರೆಗೂ ಜನರು ಬಹುಕಷ್ಟದಿಂದ ಈ ಪರ್ವತ ಶ್ರೇಣಿಯನ್ನು ದಾಟುತ್ತಿದ್ದರು ಈಗ ಈ ಬೆಟ್ಟದ ಮೂಲಕ ಸುರಂಗವನ್ನು ಕೊರೆದು ದಾರಿ ಮಾಡಿದ್ದಾರೆ ಈ ಪರ್ವತವು ಬಹು ಎತ್ತ ರವಾಗಿರುವುದರಿಂದ ಶಿಖರಪ್ರಾಂತವು ಹಿಮದಿಂದ ಯಾವಾಗಲೂ ಮುಚ್ಚಿರುವುದು ಚಳಿಗಾಲದಲ್ಲಿ ಹಿಮವು ಬೆಟ್ಟದಮೇಲೆ ಧಾರಾಳವಾಗಿ ಸುರಿಯುವುದು ಆ ಕಾಲ ದಲ್ಲಿ ಪಥಿಕರು ದಾರಿದಪ್ಪಿ ಬಿದ್ದು ಹಿಮದಿಂದ ಮುಚ್ಚಲ್ಪಡುವರು ಇಂತಹ ಜನ ರಿಗೆ ಸಹಾಯ ಮಾಡಲು ಅಲ್ಲಿ ಕೆಲವರು ಮನೆ ಮಠವನ್ನು ಕಟ್ಟಿಕೊಂಡಿರುವರು. ಅಲ್ಲಿರುವ ಜನರು ಬಹಳ ಸಾಹಸಿಗಳಾದ ನಾಯಿಗಳಿಂದ ಅಂತಹ ಉಪಕಾರವನ್ನು ಮಾಡಲು ಶಕ್ತರಾಗಿರುವರು ಆ ನಾಯಿಗಳಿಗೆ ಸೆಂಟ್ ಬರ್ನಾರ್ಡ್ ನಾಯಿಗಳು ಎಂದು ಹೆಸರು ನಾಯಿಗಳು ಅಲ್ಲಿರುವ ಸೆಂಟ್ ಬರ್ನಾರ್ಡ್ ಮಠಕ್ಕೆ ಸೇರಿದುವು ಅಲ್ಲಿಯ ಜನರು ಅವನ್ನು ಬಹು ಪ್ರೀತಿಯಿಂದ ಸಾಕುತ್ತಿರುವರು

ಅಲ್ಲಿದ್ದ ಒಂದಾನೊಂದು ನಾಯಿಯು ಸುಮಾರು ನಾಲ್ವತ್ತು ಜನರನ್ನು ಕಾಪಾ ಡಿತಂತೆ ಆ ನಾಯಿಯು ದಾರಿ ತಪ್ಪಿ ಬಿದ್ದಿದ್ದವರನ್ನು ಹುಡುಕಿಕೊಂಡು ಎಂದಿ ನಂತೆ ಹೋಗುತ್ತಿದ್ದಾಗ ಒಂದು ಮಗುವನ್ನು ಕಂಡಿತು ಚಳಿಯಿಂದ ಕೈಕಾಲೆಲ್ಲ

ಸಡತುಕೊಂಡು ಹೋಗಿದ್ದ ಆ ಮಗುವನ್ನು ತನ್ನ ನಾಲಗೆಯಿಂದ ನೆಕ್ಕಿನೆಕ್ಕಿ ಆ ಮಗುವಿನ ಮೈಯಲ್ಲಿ ಶಾಖವನ್ನು ಹುಟ್ಟಿಸಿ ಹೇಗೋ ತನ್ನ ಮೇಲೆ ಕುಳ್ಳಿರಿಸಿಕೊಂಡು ಮಠಕ್ಕೆ ತಂದು ಬಿಟ್ಟಿತಂತೆ

ಮಠದವರು ಪ್ರತಿದಿನವೂ ಜನರನ್ನು ಹುಡುಕಲು ನಾಯಿಗಳನ್ನು ಜೋಡಿ ಜೋಡಿಯಲ್ಲಿ ಕಳುಹಿಸುವರಂತೆ ಒಂದು ನಾಯಿಯ ಕುತ್ತಿಗೆಗೆ ಸ್ವಲ್ಪ ರೊಟ್ಟಿಯನ್ನೂ ಶಾಖ ಉಂಟುಮಾಡಲು ಬೇಕಾದ ದ್ರಾವಕವುಳ್ಳ ಒಂದು ಪೆಟ್ಟಿಗೆಯನ್ನೂ ಇನ್ನೊಂದು ನಾಯಿಯ ಬೆನ್ನಿಗೆ ಬಟ್ಟೆಯನ್ನೂ ಕಟ್ಟಿ ಕಳುಹಿಸುವರಂತೆ ಇವು ಹುಡುಕಿಕೊಂಡು ಹೋಗಿ ಜನರು ಬಿದ್ದಿರುವ ಸ್ಥಳವನ್ನು ವಾಸನೆಯಿಂದ ಹಿಡಿದು ತಮಗೆ ಸಾಧ್ಯವಾದರೆ ಅವರನ್ನು ಚೇತರಿಸಿ ಜತೆಯಲ್ಲಿ ಕರೆದುಕೊಂಡು ಬರುತ್ತಲೂ, ಇಲ್ಲದಿದ್ದರೆ ಬಗುಳಿ ಬಗುಳಿ, ಮಠದವರನ್ನು ಕರೆತಂದು ಜನರಿಗೆ ಬೇಕಾದ ಸಹಾಯವನ್ನು ಕೊಡಿಸು ತ್ತಲೂ ಹೇಗೋ ಸಾಧ್ಯವಾದ ಮಟ್ಟಿಗೆ ಜನರನ್ನು ಉಳಿಸುವ ಮಾರ್ಗವನ್ನು ತಿಳಿದಿವೆ ಯಂತೆ ಜನೋಪಕಾರಿಗಳೆಂದರೆ ಇವೇ ಅಲ್ಲವೆ ?

---

## ೫೭ ಬೆಂಜಮಿನ್ ಫ್ರಾಂಕ್ಲಿನ್

ಈ ದಿನ ಒಬ್ಬನ ನಿಜವಾದ ಕಥೆಯನ್ನು ಹೇಳುವೆನು, ಕೇಳಿ ಅವನು ಒಬ್ಬ ಬಡವನ ಮನೆಯಲ್ಲಿ ಹುಟ್ಟಿದರೂ ಬಹು ಕಷ್ಟದಿಂದ ಧರ್ಮವನ್ನು ಬಿಡದೆ ಹೆಸರನ್ನೂ ಜ್ಞಾನವನ್ನೂ ಹಣವನ್ನೂ ಸಂಪಾದಿಸಿ ಜನರಿಗೆ ತನ್ನ ಕೈಯಲ್ಲಾದಷ್ಟು ಉಪಕಾರ ವನ್ನು ಮಾಡಿ, ಲೋಕದಲ್ಲಿ ಪ್ರಸಿದ್ಧಿಗೊಂಡನು ಹಾಗೆ ಹೆಸರುವಾಸಿಯನ್ನು ಪಡೆದ ಮಹಾನುಭಾವನೇ ಬೆಂಜಮಿನ್ ಫ್ರಾಂಕ್ಲಿನ್. ಇವನು ಇಲ್ಲಿಗೆ ಬಹು ದೂರದಲ್ಲಿ ರುವ ಅಮೆರಿಕಾ ಖಂಡದ ಬೋಸ್ಟನ್ ಎಂಬ ಪಟ್ಟಣದಲ್ಲಿ ಈಗ ಸುಮಾರು ಒಂದು ನೂರು ವರ್ಷದಲ್ಲಿ ಹುಟ್ಟಿದನು ಇವನ ತಂದೆಯು ಸಾಬೂನನ್ನೂ ಮಯಣದ ಬತ್ತಿಯನ್ನೂ ಮಾಡಿ ಮಾರಿ ಜೀವಿಸುತ್ತಿದ್ದನು ಅವನು ಬಹಳ ಬಡವನು ಆದರೂ ಮಗನಿಗೆ ವಿದ್ಯೆಯನ್ನು ಹೇಳಿಸಬೇಕೆಂದು ಎಂಟನೆಯ ವಯಸ್ಸಿನಲ್ಲಿ ಅವನನ್ನು ಒಂದು ಪಾಠಶಾಲೆಗೆ ಕಳುಹಿಸಿದನು ಅಲ್ಲಿ ಎರಡುವರ್ಷ ಕಾಲ ಮಗನು ವಿದ್ಯೆ ಯನ್ನು ಕಲಿತನು ಅವನು ಓದಿದ ತರಗತಿಗಳಲ್ಲಿ ಅವನೇ ಮೊದಲನೆಯವನಾಗಿ ದ್ದನು ಬಹುಚೆನ್ನಾಗಿ ಓದುತ್ತಿದ್ದುದರಿಂದ ಅವನು ಉಪಾಧ್ಯಾಯರಿಗೆ ಅಚ್ಚುಮೆ ಚ್ಚಾಗಿಯೂ ಜತೆಯ ಹುಡುಗರಿಗೆ ಬೇಕಾದವನಾಗಿಯೂ ಇದ್ದನು ಆದರೆ ಎರಡು ವರ್ಷಕ್ಕಿಂತ ಹೆಚ್ಚುಕಾಲ ಅಲ್ಲಿ ಓದಲು ಬೆಂಜಮಿನ್‌ಫ್ರಾಂಕ್ಲಿನ್‌ಗೆ ಅವಕಾಶವಾಗ ಲಿಲ್ಲ ತಂದೆಯು ಬಡವನಾಗಿದ್ದುದರಿಂದ ಮಗನೂ ಬಂದು ತನ್ನೊಡನೆ ಕೆಲಸಮಾ ಡಿದರೆ ಜೀವನಕ್ಕೆ ಅನುಕೂಲವಾಗುವುದೆಂದಾಲೋಚಿಸಿ, ಮಗನ ಓದುವಿಕೆಯನ್ನು ಬಿಡಿಸಿ ಮನೆಗೆ ಕರೆದುಕೊಂಡುಹೋದನು

ಬೆಂಜಮಿನ್ ಫ್ರಾಂಕ್ಲಿನ್‌ಗೆ ಓದುವುದರಲ್ಲಿಯೇ ಹೆಚ್ಚಾದ ಆಸಕ್ತಿಯಿದ್ದುದರಿಂದ ಸಾಬೂನನ್ನೂ ಮೆಯಣದ ಬತ್ತಿಯನ್ನೂ ಮಾಡುವ ಕೆಲಸದಲ್ಲಿ ಮನಸ್ಸುಂಟಾಗಲಿಲ್ಲ. ಹೀಗೆಯೇ ಒಂದೆರಡು ವರ್ಷಗಳು ಕಳೆದುವು ತರುವಾಯ ಅಚ್ಚಿನ ಕಾರ್ಖಾನೆಯನ್ನಿಟ್ಟುಕೊಂಡಿದ್ದ ತನ್ನ ಅಣ್ಣನಲ್ಲಿ ಹೋಗಿ ಅಚ್ಚಿನ ಕೆಲಸವನ್ನು ಕಲಿಯಲು ಮೊದಲುಮಾಡಿದನು ಇಲ್ಲಿ ಓದುವುದಕ್ಕೆ ಕಾಲವೂ ವಿಷಯವೂ ಸಿಕ್ಕುತಿದ್ದುದರಿಂದ ಅಚ್ಚಿನ ಕೆಲಸವನ್ನು ಬಲು ಚೆನ್ನಾಗಿಮಾಡಲು ಕಲಿತನು ಹಾಗೆಯೆ ಅನುಕೂಲವಾದಹಾಗೆಲ್ಲ ಬೇಕಾದ ಪುಸ್ತಕಗಳನ್ನು ಕೊಂಡುಕೊಂಡು ಓದಲೂ ಆರಂಭಿಸಿದನು ಸ್ವಲ್ಪ ಕಾಲವಾದ ಮೇಲೆ ತನಗೆ ತೋರಿದುದನ್ನು ಚೆನ್ನಾಗಿ ಬರೆಯಲು ಮೊದಲುಮಾಡಿದನು ಇಷ್ಟರಲ್ಲಿಯೇ ಇವನ ಅಣ್ಣನು ಒಂದು ಪತ್ರಿಕೆಯನ್ನು ಪ್ರಕಟಿಸಲು ಅದಕ್ಕೆ ಇವನೂ ಬರೆಯುತ್ತ ಬಂದನು ಇವನು ಬರೆಯುತ್ತಿದ್ದುದನ್ನು ಎಲ್ಲರೂ ಚೆನ್ನಾಗಿದೆಯೆಂದು ಹೊಗಳುತ್ತಿದ್ದರು

ಇವನಿಗೆ ಆಗ ಹದಿನಾರು ಹದಿನೇಳು ವರ್ಷ ಈ ವಯಸ್ಸಿನಲ್ಲಿ ತನ್ನ ಅಣ್ಣನ ಊರನ್ನು ಬಿಟ್ಟು ಇನ್ನೊಂದು ಪಟ್ಟಣವನ್ನು ಸೇರಿ ಅಲ್ಲಿಂದ ಬಹು ದೂರ ದೇಶದಲ್ಲಿದ್ದ ಲಂಡನ್ ಪಟ್ಟಣಕ್ಕೆ ಬಂದು ಅಲ್ಲಿ ಅಚ್ಚಿನ ಕೆಲಸವನ್ನು ಬಹು ಶ್ರಮದಿಂದ ಕಲಿತನು. ಲಂಡನ್ ಪಟ್ಟಣದಲ್ಲಿ ಮೂರು ವರ್ಷಕಾಲವಿದ್ದನು ಕೂಡಲೆ ತನ್ನ ದೇಶಕ್ಕೆ ಹಿಂದಿರುಗಿ ಬಂದು ಒಂದು ಅಚ್ಚಿನ ಕಾರ್ಖಾನೆಯನ್ನು ಇಟ್ಟನು ಈ ಕಾರ್ಖಾನೆಯಲ್ಲಿ ಫ್ರಾಂಕ್ಲಿನ್ನನು ಮನಸ್ಸಿಟ್ಟು ಬಲು ಚೆನ್ನಾಗಿ ಕಲಸ ಮಾಡುತ್ತಲೂ ಹೇಳಿದ ಕಾಲಕ್ಕೆ ಕೊಡುತ್ತಲೂ ಇದ್ದುದರಿಂದ ಜನರಿಗೆ ಇವನಲ್ಲಿ ನಂಬಿಕೆ ಹುಟ್ಟಿ ಇವನಿಗೆ ಬೇಕಾದಷ್ಟು ಕೆಲಸವನ್ನು ಕೊಡುತ್ತ ಬಂದರು. ಆಗ ಇವನು ಒಂದು ವರ್ತಮಾನ ಪತ್ರಿಕೆಯನ್ನು ಅಚ್ಚು ಹಾಕಲು ಆರಂಭಿಸಿದನು ಇದರಲ್ಲಿ ನಿಜವಾದುದನ್ನೇ ಬರೆಯುತ್ತಲೂ ನ್ಯಾಯವಾದುದನ್ನೇ ಹಿಡಿದು ವಾದಿಸುತ್ತಲೂ ಇದ್ದುದರಿಂದ ಅನೇಕರು ಇವನ ಪತ್ರಿಕೆಯನ್ನು ಕೊಂಡು ಕೊಂಡು ಓದುತ್ತಿದ್ದರು ಇದರಿಂದ ಇವನಿಗೆ ಬೇಕಾದಷ್ಟು ಹಣವು ಬರುತ್ತಿದ್ದಿತು ಅಷ್ಟು ಹಣ ಸಂಪಾದಿಸಿದರೂ ಇವನು ಅಹಂಕಾರಪಡದೆ ಮೊದಲು ಇದ್ದಂತೆ ತನ್ನ ಕೆಲಸವನ್ನು ತಾನೇ ಮಾಡಿಕೊಳ್ಳುತ್ತಲೂ ಎಲ್ಲವನ್ನೂ ತಾನೇ ನೋಡಿಕೊಳ್ಳುತ್ತಲೂ ಪಾಲು ಮಾರದೆ ಕೆಲಸವನ್ನು ಮಾಡುತ್ತಿದ್ದನು

ಫ್ರಾಂಕ್ಲಿನ್ನನು ತಪ್ಪದೆ ಬೆಳಗಿನಲ್ಲಿ ಐದು ಘಂಟೆಗೆ ಏಳುತ್ತಿದ್ದನು ಇಂತಿಂತಹ ಹೊತ್ತಿನಲ್ಲಿ ಈ ಕ್ಯಾರವನ್ನು ಮಾಡಬೇಕೆಂದು ಗೊತ್ತುಮಾಡಿಕೊಂಡು ಆ ರೀತಿಯಾಗಿಯೇ ನಡಿಸುತ್ತಿದ್ದನು ಹೀಗೆ ಕಾಲವನ್ನು ಕ್ಲ್ಪಪ್ತಮಾಡಿಕೊಂಡಿದ್ದುದರಿಂದ ಅವನಿಗೆ ಫ್ರೆಂಚ್, ಇಟಾಲಿಯನ್, ಸ್ಪ್ಯಾನಿಷ್ ಭಾಷೆಗಳನ್ನೂ, ಇತರ ಪುಸ್ತಕಗಳನ್ನೂ ಓದಿ ಜ್ಞಾನವನ್ನು ಸಂಪಾದಿಸುವುದಕ್ಕವಕಾಶ ದೊರೆಯಿತು. ಇದೂ ಅಲ್ಲದೆ ಇವನು ಕೆಲವು ಕಾಲ ನಿಜವನ್ನೇ ಹೇಳುವೆನೆಂದೂ, ಇನ್ನು ಕೆಲವು ಕಾಲ ನ್ಯಾಯತಪ್ಪದೆ ನಡೆಯುವೆನೆಂದೂ, ಮತ್ತೆ ಕೆಲವು ಕಾಲ ಮಿತವಾಗಿ ಜೀವಿಸುವೆ

ನೆಂದೂ ಗೊತ್ತುಮಾಡಿಕೊಂಡು ಹಾಗೆಯೇ ನಿಜವನ್ನೂ ನ್ಯಾಯವನ್ನೂ ತಪ್ಪದೆ ನಡೆಯುವುದಕ್ಕೂ ಮಿತವಾಗಿ ಜೀವಿಸುವದಕ್ಕೂ ಅಭ್ಯಾಸಮಾಡಿಕೊಂಡನು.

ಇವನ ನಡತೆಯು ಎಲ್ಲರಿಗೂ ಒಪ್ಪುವುದಾದುದರಿಂದ ಇವನಿಗೆ ಸರ್ಕಾರದಲ್ಲಿ ಒಳ್ಳೆಯ ಅಧಿಕಾರವು ದೊರೆಯಿತು, ಅದನ್ನು ಬಲು ಚೆನ್ನಾಗಿ ಮಾಡಿದುದರಿಂದ ಅವನನ್ನು ಆ ದೇಶಕ್ಕೆ ಗೊತ್ತುಗಾರನನ್ನಾಗಿ ಮಾಡಿದರು ಆಗ ಇವನು ಆ ದೇಶವನ್ನು ಚೆನ್ನಾಗಿ ಆಳಿ, ಅನೇಕ ಧರ್ಮಕಾರ್ಯಗಳನ್ನು ಮಾಡಿದನು. ಅವನು ಎಂಬತ್ತೈದು ವರ್ಷಗಳ ಕಾಲ ಬದುಕಿ ತನ್ನ ಜನರಿಗೂ ಲೋಕಕ್ಕೂ ಉಪಕಾರ ಮಾಡಿ ದೈವಾಧೀನನಾದನು

---

## ೫೮ ತಕ್ಕ ಬೆಲೆ

ಒಂದು ದಿನ ಹಸಿವಿನಿಂದ ಸಂಕಟಪಡುತ್ತಿದ್ದ ಒಬ್ಬ ಬಡ ಹುಡುಗನು ಒಂದು ಮಿಠಾಯಿ ಅಂಗಡಿಯ ಇದಿರಿಗೆ ನಿಂತು ಮಿಠಾಯಿಯನ್ನು ಮಾಡುತ್ತಿದ್ದುದನ್ನೇ ನೋಡುತ್ತ ಘಮ್ಮಗೆ ಬರುತ್ತಿದ್ದ ಅದರ ವಾಸನೆಯನ್ನು ತೆಗೆದುಕೊಳ್ಳುತ್ತ ಇದ್ದನು ಮಿಠಾಯಿ ಮಾಡುತ್ತಿದ್ದವನು ಬಂದು, ಆಚೆಗೆ ಹೋಗೆಂದು ಇವನಿಗೆ ಬಾರಿಬಾರಿಗೂ ಹೇಳಿದನು ಎಷ್ಟು ಹೇಳಿದರೂ ಕೇಳದೆ ಅಲ್ಲಿಯೇ ನಿಂತಿದ್ದುದರಿಂದ ಮಿಠಾಯಿ ಮಾಡುವವನಿಗೆ ಕೋಪಬಂದು ಹುಡುಗನ ಹತ್ತಿರ ಕಾಸು ಕಿತ್ತುಕೊಂಡು ಓಡಿಸಬೇಕೆಂದು ' ನೀನು ಮೂರುಕಾಸು ಕೊಟ್ಟುಹೋದಲ್ಲದೆ ಬಿಡೆನು, ನೀನು ಮಿಠಾಯಿಯ ವಾಸನೆಯನ್ನು ತೆಗೆದುಕೊಂಡಿದ್ದೀಯೆ ' ಎಂದನು ಆಗ ಆ ಹುಡುಗನಲ್ಲಿ ಒಂದು ಕಾಸೂ ಇರಲಿಲ್ಲ, ಮಿಠಾಯಿಯವನು ಅವನನ್ನು ಹಿಡಿದು ಎಳೆದಾಡುತ್ತಿದ್ದನು ಆ ಹುಡುಗನು ದೊಡ್ಡದಾಗಿ ಅಳಲು ಮೊದಲುಮಾಡಿದನು ಈ ಅಳುವನ್ನು ಕೇಳಿ ಜನಗಳು ಬಂದು ಸೇರಿದರು ಆಗ ಮಿಠಾಯಿಯವನು ತನಗೆ ಕಾಸುಕೊಟ್ಟಲ್ಲದೆ ಆ ಹುಡುಗನನ್ನು ಬಿಡೆನೆಂದನು ಪಾಪ! ಆ ಬಡ ಹುಡುಗನಲ್ಲಿ ಮೂರು ಕಾಸು ಇದ್ದರೆ ಕಡುಬನ್ನಾದರೂ ತಿಂದು ಹೊಟ್ಟೆಯನ್ನು ಸ್ವಲ್ಪಮಟ್ಟಿಗಾದರೂ ತುಂಬಿಕೊಳ್ಳುತ್ತಿದ್ದನು

ಹೀಗಿರುವಾಗ ಅಲ್ಲಿಗೆ ಬಂದ ಒಬ್ಬನು ಇವರ ಜಗಳವನ್ನು ಕೇಳಿ ಆ ಹುಡುಗನಿಗೆ ಮೂರು ಮೂರು ಕಾಸಿನ ಎರಡು ಬಿಲ್ಲೆಗಳನ್ನು ಕೊಟ್ಟು ಮಿಠಾಯಿಯವನಿಗೆ ಆ ಹುಡುಗನನ್ನು ಸ್ವಲ್ಪ ಬಿಡೆಂದು ಹೇಳಿದನು ಮಿಠಾಯಿಯವನು, ಕಾಸು ಸಿಕ್ಕುವುದೆಂದು ಅವನನ್ನು ಬಿಟ್ಟನು ಆಗ ಆ ಹುಡುಗನಿಗೆ ಆ ಮೂರುಕಾಸಿನ ಬಿಲ್ಲೆಗಳನ್ನು ಶಬ್ದಮಾಡೆಂದು ಕಾಸುಕೊಟ್ಟವನು ಹೇಳಿದನು ಹುಡುಗನು ಅದೇ ಮೇರೆ ಶಬ್ದವನ್ನು ಮಾಡಿದನು ಆಗ ಅವನು ಮಿಠಾಯಿ ಮಾರುವವನ ಕಡೆಗೆ ತಿರುಗಿ ಆ ಹುಡುಗನು ನಿನ್ನ ಮಿಠಾಯಿಯ ವಾಸನೆ ತೆಗೆದುಕೊಂಡುದಕ್ಕೆ ಆ ಹುಡುಗನ ದುಡ್ಡಿನ ಶಬ್ದವನ್ನು ನೀನು ಕೇಳಿದಂತಾಯಿತು ಅವನ ಮೂಗಿಗೆ ತೃಪ್ತಿಯಾಯಿತು, ನಿನ್ನ ಕಿವಿಗೆ ತೃಪ್ತಿಯಾಯಿತು ಆ ವಾಸನೆಗೆ ಈ ಶಬ್ದವೇ ಬೆಲೆ. ಆ ಹುಡುಗನನ್ನು ಬಿಟ್ಟು ಹೋಗು ಎಂದನು

## ೫೯. ಪ್ರಾಸ್ಕೋವಿ—(೧)

ರಷ್ಯಾ ರಾಜ್ಯವೆಂದು ಒಂದು ದೊಡ್ಡ ರಾಜ್ಯವಿರುವುದು ಆ ರಾಜ್ಯದಲ್ಲಿ ಬಹುಕಾಲದ ಹಿಂದೆ ಆಳುತ್ತಿದ್ದ ಒಬ್ಬ ಚಕ್ರವರ್ತಿಯು ತನ್ನ ಕೈಕೆಳಗಿದ್ದ ಅಧಿಕಾರಿಯನ್ನು ಗಡೀಫಾರ್ ಮಾಡಿದ್ದನು, ಎಂದರೆ ತನ್ನ ದೇಶದಿಂದ ಅವನನ್ನು ಓಡಿಸಿ ಬಹು ಚಳಿಸೀಮೆಯಾದ ಸೈಬೀರಿಯಾ ದೇಶದಲ್ಲಿರುವಂತೆ ಕಟ್ಟುಮಾಡಿದನು. ಆ ಅಧಿಕಾರಿಯು ತನ್ನ ಹೆಂಡತಿಯನ್ನೂ ಮೂರುವರ್ಷವಯಸ್ಸಿನ ಒಬ್ಬ ಮಗಳನ್ನೂ ಕರೆದುಕೊಂಡು ಸೈಬೀರಿಯಾ ದೇಶಕ್ಕೆ ಹೋಗಿ ಬಹು ಕಷ್ಟದಿಂದ ಜೀವನ ಮಾಡಿಕೊಂಡಿದ್ದನು ಆ ಅಧಿಕಾರಿಯ ಮಗಳನ್ನು ಪ್ರಾಸ್ಕೋವಿಯೆಂದು ಕರೆಯುತ್ತಿದ್ದರು ಅವಳು ಬಲು ಚಿಕ್ಕವಳಾಗಿದ್ದಾಗಲೇ ಆ ಸೈಬೀರಿಯಾ ದೇಶಕ್ಕೆ ಬಂದುದರಿಂದ ಅವಳಿಗೆ ರಷ್ಯಾ ದೇಶದ ಜ್ಞಾಪಕವೇ ಇರಲಿಲ್ಲ, ಅವಳ ತಂದೆ ತಾಯಿಗಳು ರಷ್ಯಾದೇಶದಲ್ಲಿ ಸುಖವಾಗಿದ್ದುದೂ ಅವಳಿಗೆ ಗೊತ್ತಿರಲಿಲ್ಲ. ಸೈಬೀರಿಯಾ ದೇಶವೇ ತನ್ನ ದೇಶವೆಂದೂ ತನ್ನ ತಂದೆ ತಾಯಿಗಳು ಅಲ್ಲಿಯೇ ಹುಟ್ಟಿ ಬೆಳೆದವರೆಂದೂ ತಾವೆಲ್ಲರೂ ಸುಖವಾಗಿಯೇ ಇದ್ದೇವೆಂದೂ ಅವಳು ತಿಳಿದಿದ್ದಳು.

ಪ್ರಾಸ್ಕೋವಿಗೆ ಸುಮಾರು ಹದಿನೈದು ವರ್ಷವಾಯಿತು ಒಂದು ದಿನ ಅವಳು ಏನೋ ಮಾಡುತ್ತ ಕುಳಿತಿದ್ದಾಗ ಮಗಳು ಮನೆಯಲ್ಲಿಲ್ಲವೆಂದು ತಿಳಿದು ತಂದೆತಾಯಿಗಳಿಬ್ಬರೂ ತಾವು ಹಿಂದಿದ್ದ ಸ್ಥಿತಿಯನ್ನು ಜ್ಞಾಪಿಸಿಕೊಂಡು ತಾವು ಅನುಭವಿಸುತ್ತಿದ್ದ ಸೌಖ್ಯವನ್ನು ಎತ್ತಿ ಆಡುತ್ತ ನಿಟ್ಟುಸಿರುಬಿಡುತ್ತಿದ್ದರು ಅದನ್ನು ಪ್ರಾಸ್ಕೋವಿಯು ಕೇಳಿ ಒಳಕ್ಕೆ ಬಂದಳು ಆಗ ತಂದೆ ತಾಯಿಗಳ ಕಣ್ಣುಗಳಲ್ಲಿ ನೀರು ಸುರಿಯುತ್ತಿದ್ದುದನ್ನು ಕಂಡು ಅದಕ್ಕೆ ಕಾರಣವೇನೆಂದು ಬಹುವಾಗಿ ಕೇಳಿದಳು. ಅವರು ಅವಳಿಗೆ ಹೇಳಲಿಲ್ಲ ಆದುದರಿಂದ ಆ ಕೊರಗನ್ನೇ ಮನಸ್ಸಿಗೆ ಹಚ್ಚಿಕೊಂಡು ಅವಳು ದಿನೇ ದಿನೇ ಬಡವಾಗುತ್ತಿದ್ದುದನ್ನು ಕಂಡು ಯತ್ನವಿಲ್ಲದೆ ಅವರು ತಮ್ಮ ಕಥೆಯನ್ನೆಲ್ಲ ಹೇಳಿಕೊಂಡರು ಅದನ್ನು ಕೇಳಿ ಅವಳಿಗೆ ಬಹಳ ವ್ಯಸನವಾಯಿತು ಆಗ ಪ್ರಾಸ್ಕೋವಿಯು ಎದ್ದು ತಂದೆ ತಾಯಿಗಳಿಗೆ ಸಮಸ್ಕರಿಸಿ ನನಗೆ ಅಪ್ಪಣೆಯನ್ನು ಕೊಡಿ ನಾನು ಹೋಗಿ ಚಕ್ರವರ್ತಿಯ ಕಾಲಿಗೆರಗಿ ನಿಮ್ಮನ್ನು ಬಿಡಿಸಿಕೊಂಡು ಬರುವೆನು' ಎಂದು ಕೇಳಿಕೊಂಡಳು

ಅವರಿದ್ದ ಸ್ಥಳಕ್ಕೂ ಚಕ್ರವರ್ತಿ ಇದ್ದ ಊರಿಗೂ ಎಷ್ಟೋ ದೂರ ದಾರಿಯಲ್ಲಿ ಅನೇಕ ನದಿಗಳನ್ನು ಹಾಯಬೇಕಾಗಿರುವುದು ದೊಡ್ಡ ಬೆಟ್ಟವನ್ನೇ ದಾಟಬೇಕಾಗಿರುವುದು ಇವೇ ಅಲ್ಲದೆ ಒಂದು ಭಯಂಕರವಾದ ಅರಣ್ಯದ ಮಧ್ಯೇ ಹೋಗಬೇಕಾಗಿರುವುದು. ಇವೆಲ್ಲ ಆ ಹುಡುಗಿಯಿಂದ ಸಾಧ್ಯವೇ? ದಾರಿಯಲ್ಲಿ ಒಂದು ಸತ್ರ ಸಹ ಇರಲಿಲ್ಲ ಎಷ್ಟೆಷ್ಟೋ ದೂರದಲ್ಲಿ ಒಂದೊಂದು ಹಳ್ಳಿ ಇವಳೋ ಸಣ್ಣ ಹುಡುಗಿ. ಈ ಹುಡುಗಿಯು ನದಿಗಳನ್ನೂ ಬೆಟ್ಟಗುಡ್ಡಗಳನ್ನೂ ಕಾಡುಗಳನ್ನೂ ದಾಟಿ ಹೋಗುವ ಬಗೆ ಹೇಗೆ? ಹೇಗೋ ಕಷ್ಟಪಟ್ಟುಕೊಂಡು ರಾಜಧಾನಿಯನ್ನು ಸೇರಿದರೂ, ಆ ಚಕ್ರವರ್ತಿಯೆಲ್ಲಿ? ಆ ಮಹಾಪಟ್ಟಣದಲ್ಲಿ ಅವಳನ್ನು

ಕೇಳುವವರು ಯಾರು ? ಈ ಕಷ್ಟಗಳನ್ನೆಲ್ಲ ತಿಳಿದ ತಂದೆ ತಾಯಿಗಳಿಬ್ಬರೂ ಮಗಳಿಗೆ ಹೋಗಬೇಡವೆಂದು ಬಹು ವಿಧವಾಗಿ ಹೇಳಿದರು ಪ್ರಾಸ್ಕೋವಿಯು ಹೋಗುವು ದಕ್ಕೆ ಅಪ್ಪಣೆಯೊಂದನ್ನು ಕೇಳುತ್ತಿದ್ದಳಲ್ಲದೆ ಮತ್ತಾವುದನ್ನೂ ಕೇಳುತ್ತಿರಲಿಲ್ಲ. ರಾಜ ಧಾನಿಗೆ ಹೋಗುವುದೇ ಖಂಡಿತವೆಂದು ಅವಳು ಹಟ ಹಿಡಿದಳು ತಂದೆ ತಾಯಿ ಗಳು ಯತ್ನವಿಲ್ಲದೆ ಒಪ್ಪಬೇಕಾಯಿತು. ಅವಳು ಹೊರಟೇ ಹೊರಟಳು

---

## ೬೦. ಪ್ರಾಸ್ಕೋವಿ—(೨)

ಪ್ರಾಸ್ಕೋವಿಯು ದಾರಿಯಲ್ಲಿ ಪಡುವ ಕಷ್ಟವನ್ನು ನೆನೆದು ನೆನೆದು ತಂದೆ ತಾಯಿಗಳು ದುಃಖಪಡುತ್ತಿದ್ದರು ಅವರು ಹೇಳಿದಂತೆ ಅವಳು ಪಟ್ಟ ಕಷ್ಟವನ್ನು ಇಲ್ಲಿ ತಿಳಿಸಲು ಸಾಧ್ಯವಿಲ್ಲ ಹದಿನೆಂಟು ತಿಂಗಳು ಒಂದೇ ಸಮನಾಗಿ ನಡೆದಳು. ಒಂದು ದಿನ ಬಹು ಆಯಾಸದಿಂದ ಒಂದು ಮರದ ಕೆಳಗೆ ಮಲಗಿದ್ದಾಗ ತೋಳ ಗಳು ಸುತ್ತ ಮುತ್ತಿಕೊಂಡು ಬಂದುವು ಇನ್ನೊಂದು ದಿನ ನದಿಯನ್ನು ದಾಟು ತ್ತಿದ್ದಾಗ ಮುಳುಗಿಯೇ ಹೋಗಿಬಿಡುತ್ತಿದ್ದಳು ಒಂದಾವೃತ್ತಿ ತಿನ್ನಲಿಕ್ಕೆ ಏನೂ ಸಿಕ್ಕದೆ ಹೊದೆಯಲಿಕ್ಕೆ ಬಟ್ಟೆಯೂ ಇಲ್ಲದೆ ಹಸಿವಿನಿಂದಲೂ ಚಳಿಯಿಂದಲೂ ಸತ್ತೇ ಹೋಗಿದ್ದಳು ತಂದೆ ತಾಯಿಗಳಲ್ಲಿ ಭಕ್ತಿಯುಳ್ಳ ಆ ಪ್ರಾಸ್ಕೋವಿಯ ಸಾಹಸಕ್ಕೆ ದೇವರು ಮೆಚ್ಚಿ ಅವಳಿಗೆ ಬಂದ ಕಷ್ಟಗಳನ್ನೆಲ್ಲ ಸುಲಭವಾಗಿ ಪರಿಹಾರಮಾಡಿದನು. ಕೊನೆಗೆ ಒಂದೂವರೆ ವರ್ಷಕ್ಕೆ ರಾಜಧಾನಿಯನ್ನು ಸೇರಿದಳು. ಅಲ್ಲಿ ಹೇಗೋ ಮಾಡಿ ಒಂದು ಅರ್ಜಿಯನ್ನು ಬರಿಸಿಕೊಂಡು ಚಕ್ರವರ್ತಿಗೆ ಕೊಡಬೇಕೆಂದು ಬಹು ದಿನಗಳು ಕಾದಳು. ಏನೂ ಪ್ರಯೋಜನವಾಗಲಿಲ್ಲ ಅರಮನೆಗೆ ಹೋಗಿ ಬರು ತ್ತಿದ್ದ ಅಧಿಕಾರಿಗಳ ಸಹಾಯದಿಂದಾದರೂ ಚಕ್ರವರ್ತಿಗೆ ಅರ್ಜಿಯನ್ನು ಕೊಡ ಬೇಕೆಂದು ಪ್ರಯತ್ನಪಟ್ಟಳು. ಜೂಲು ಜೂಲು ಬಟ್ಟೆಯನ್ನು ಹಾಕಿಕೊಂಡು ಹಸಿದು ದಣಿದು, ಕಂಗೆಟ್ಟಿದ್ದ ಆ ಪ್ರಾಸ್ಕೋವಿಯನ್ನು ಆದರಿಸುವ ಅಧಿಕಾರಿ ಯೊಬ್ಬನೂ ಆ ದೊಡ್ಡ ಪಟ್ಟಣದಲ್ಲಿ ಸಿಕ್ಕಲಿಲ್ಲ

ಪಡಲಾಗದ ಕಷ್ಟವನ್ನು ಪಟ್ಟು ರಾಜಧಾನಿಯನ್ನು ಸೇರಿದರೂ ಪ್ರಾಸ್ಕೋ ವಿಯ ಆಸೆ ಕೈಗೂಡುವುದಕ್ಕೆ ಅನುಕೂಲಿಸಲಿಲ್ಲ ಪ್ರಾಸ್ಕೋವಿಯ ಶಕ್ತಿಯೂ ಅಟ್ಟೆಹೋಗಿದ್ದಿತು ತಂದೆ ತಾಯಿಗಳನ್ನು ಹೇಗಾದರೂ ಬಿಡಿಸಿಕೊಂಡು ತರು ವಾಯ ತಾನು ಪ್ರಾಣವನ್ನು ಬಿಡಬೇಕೆಂದು ಹೇಗೋ ಪ್ರಾಣವನ್ನು ಹಿಡಿದುಕೊಂಡು ನಿತ್ಯವೂ ಅರಮನೆಯ ಬಾಗಿಲನ್ನು ಕಾದಿರುತ್ತಿದ್ದ ಆ ಪ್ರಾಸ್ಕೋವಿಯನ್ನು ಒಬ್ಬ ನಾರೀ ಮಣಿಯು ಕಂಡು ಅವಳ ಸಮಾಚಾರವನ್ನೆಲ್ಲ ಕೇಳಿ, ಅವಳನ್ನು ಆದರಿಸಿ ತನ್ನ ಗಂಡನಿಗೆ ಹೇಳಿ ಬಹು ಸಾಹಸಪಟ್ಟು ಪ್ರಾಸ್ಕೋವಿಗೆ ಚಕ್ರವರ್ತಿಯ ಸಂದರ್ಶನ ವನ್ನು ಮಾಡಿಸಿದಳು ಚಕ್ರವರ್ತಿಯನ್ನು ನೋಡಿದೊಡನೆಯೇ ಆ ಹುಡುಗಿಯು ಅಡ್ಡಬಿದ್ದು ತನ್ನ ದುಃಖ ವೃತ್ತಾಂತವನ್ನೆಲ್ಲ ಹೇಳಿ ತನ್ನ ತಂದೆ ತಾಯಿಗಳನ್ನು ಬಿಡಿಸಿ, ಇಲ್ಲಿಗೆ ಬರಮಾಡಿಕೊಡಬೇಕೆಂದು ಬೇಡಿಕೊಂಡಳು

ಪ್ರಾಸ್ಕೋವಿಯ ವೃತ್ತಾಂತವನ್ನು ಕೇಳಿದ ಯಾವ ಮನುಷ್ಯನಿಗೆ ತಾನೇ ಕನಿಕರ ಹುಟ್ಟದು! ಚಕ್ರವರ್ತಿಯು ಒಡನೆಯೇ ಅವಳು ಬೇಡಿದುವನ್ನು ಕೊಟ್ಟನು. ಮರುದಿನ ಅವಳಿಗೆ ಹಣವನ್ನು ಕೊಟ್ಟು ಚೇತರಿಸಿಕೊಳ್ಳುವಂತೆ ಹೇಳಿ ಕಳುಹಿಸಿದನು ಆ ತಂದೆತಾಯಿಗಳಿಗೆ ಒಡನೆಯೇ ಬಿಡುಗಡೆಯಾಯಿತು. ತಮ್ಮ ಸೆರೆಯನ್ನು ಬಿಡಿಸಲು ಬಹು ಶ್ರಮಪಟ್ಟ ಆ ಕನ್ಯಾರತ್ನವನ್ನು ಪೂಜಿಸಿಕೊಂಡು ಸುಖವಾಗಿರಲು ಅವರು ಬಹು ಬೇಗ ಬಂದರು ಆದರೆ ಅಂತಹ ಸೌಖ್ಯವನ್ನು ಬಹುಕಾಲ ಅನುಭವಿಸಲು ದೇವರು ದಯಮಾಡಲಿಲ್ಲ. ತಂದೆ ತಾಯಿಗಳು ಬಿಡುಗಡೆಯಾಗಿ ಬಂದುದನ್ನು ನೋಡಿದ ಕೆಲವು ದಿನಗಳಲ್ಲಿಯೇ ಪ್ರಾಸ್ಕೋವಿಯು ದೇವಲೋಕವನ್ನು ಸೇರಿದಳು ಮಾತಾ ಪಿತೃ ಸೇವೆಯಲ್ಲಿ ಪ್ರಾಣವನ್ನು ಒಪ್ಪಿಸಿದ ಆ ಪ್ರಾಸ್ಕೋವಿಯ ಚರಿತ್ರೆಯು ಕೇಳತಕ್ಕುದಲ್ಲವೆ? ಪ್ರಾಸ್ಕೋವಿಗೆ ತಂದೆ ತಾಯಿಗಳಲ್ಲಿ ಎಷ್ಟು ಪ್ರೀತಿಯಿದ್ದಿತು!

---

## ೬೧. ಇಬ್ಬರು ಮಿತ್ರರು

ಒಂದಾನೊಂದು ಪಟ್ಟಣದಲ್ಲಿ ಬಹುಕಾಲದ ಹಿಂದೆ ಒಬ್ಬ ರಾಜನು ಆಳುತ್ತಿದ್ದನು ಅವನನ್ನು ಕಂಡರೆ ಜನರು ನಡುಗಿ ಹೋಗುತ್ತಿದ್ದರು ಅವನು ಬಹು ದುಷ್ಟನು ಒಂದೊಂದು ವೇಳೆ ಬಹು ಸ್ವಲ್ಪ ತಪ್ಪುಮಾಡಿದವನನ್ನು ಕೂಡ ಕೋಳಕ್ಕೆ ಹಾಕಿಸುತ್ತಿದ್ದನು ಅವನಲ್ಲಿ ದಯೆ ಎಂಬುದೇ ಇಲ್ಲವೆನ್ನುತ್ತಿದ್ದರು ಜನರು ಕಷ್ಟಪಡುವುದನ್ನು ನೋಡುವುದರಲ್ಲಿ ಅವನಿಗೆ ಬಹು ಸಂತೋಷವಿದ್ದಿತಂತೆ

ಇಂತಹ ರಾಜನ ಪಟ್ಟಣಕ್ಕೆ ಪ್ರಸಿದ್ಧನಾದ ಪಂಡಿತನೊಬ್ಬನು ಏನೋ ಕೆಲಸವಾಗಿ ಹೋಗಿದ್ದನು. ಅವನು ಯಾವುದೋ ಕಾರಣದಿಂದ ರಾಜನ ಬಳಿಗೆ ಹೋಗಲು ರಾಜನ ಕೋಪಕ್ಕೆ ಈಡಾಗಿ ಮರಣ ದಂಡನೆಗೆ ಗುರಿಯಾದನು ಇನ್ನು ಬದುಕಲು ಅವಕಾಶವಿಲ್ಲವೆಂದು ಎಂಟು ದಿನಗಳ ಮಟ್ಟಿಗೆ ಊರಿಗೆ ಹೋಗಿ ಹೆಂಡತಿ ಮಕ್ಕಳನ್ನು ನೋಡಿ ಅವರಿಗೆ ಹೇಳತಕ್ಕುದನ್ನು ಹೇಳಿ ಬರಲು ಅಪ್ಪಣೆಯನ್ನು ಕೊಡೆಂದು ರಾಜನನ್ನು ಬಹಳವಾಗಿ ಬೇಡಿಕೊಂಡನು ರಾಜನಿಗೆ ಸ್ವಲ್ಪ ಕನಿಕರ ಹುಟ್ಟಿ,—ನೀನು ಹಿಂದಿರುಗಿ ಬರುವವರೆಗೂ ಸೆರೆಯಲ್ಲಿದ್ದು ನೀನು ಹೇಳಿದ ದಿನ ಹೊತ್ತಿಗೆ ಸರಿಯಾಗಿ ಬಾರದಿದ್ದರೆ, ನಿನ್ನ ಪ್ರಾಣಕ್ಕೆ ಪ್ರತಿಯಾಗಿ ಪ್ರಾಣವನ್ನು ಒಪ್ಪಿಸುವನು ಯಾವನಾದರೂ ಸಿಕ್ಕಿದರೆ ಅವನನ್ನು ಇಟ್ಟುಕೊಂಡು ನಿನ್ನನ್ನು ಬಿಡುವೆನು —ಎಂದನು ಈ ವರ್ತಮಾನವನ್ನು ತಿಳಿದ ಆ ಪಂಡಿತನ ಸ್ನೇಹಿತನೊಬ್ಬನು ರಾಜನಲ್ಲಿಗೆ ಬಂದು ಪಂಡಿತನಿಗೆ ತಿಳಿಯದಂತೆ ಅವನ ಪ್ರಾಣಕ್ಕೆ ತನ್ನ ಪ್ರಾಣವೆಂದು ರಾಜನಿಗೆ ಹೊಣೆಮಾಡಿ ಕೊಟ್ಟು ಆ ಪಂಡಿತನನ್ನು ಬಿಡಿಸಿದನು.

ಪಂಡಿತನು, ತನ್ನನ್ನು ಬಿಡಿಸಿದ ಮಹಾತ್ಮನನ್ನು ದೇವರು ಬಹುಕಾಲ ಕಾಪಾಡಲಿ ಎಂದು ಹರಸಿ ಊರಿಗೆ ಹೋಗಿ ಹೆಂಡತಿ ಮಕ್ಕಳಿಗೆ ಹೇಳಬೇಕಾದುದನ್ನೆಲ್ಲ

ಹೇಳಿ ಹಿಂದಿರುಗಿದನು. ಆದರೆ ತಾನು ಹೇಳಿದ ಕಾಲಕ್ಕೆ ಬರಲು ಬಹು ತೊಂದರೆಗಳು ಸಂಭವಿಸಿದುವು ಇತ್ತ ಗೊತ್ತುಮಾಡಿದ ದಿನ ಬೆಳಕು ಹರಿಯಿತು. ಪಂಡಿತನು ಇನ್ನೂ ಬರಲಿಲ್ಲ ಶೂಲಕ್ಕೆ ಹಾಕುವ ಕಾಲವೂ ಹತ್ತಿರವಾಗುತ್ತ ಬಂದಿತು. ಪಂಡಿತನು ಅಗಲೂ ಇಲ್ಲ ಆಗ ಪಂಡಿತನ ತಪ್ಪಿಗೆ ಹೊಣೆಯಾಗಿ ಪ್ರಾಣವೊಪ್ಪಿಸಬೇಕಾಗಿರುವ ಮನುಷ್ಯನ ಸಂಕಟವನ್ನು ನೋಡಿ ಸಂತೋಷಪಡಬೇಕೆಂದು ರಾಜನು ಸೆರೆ ಮನೆಗೆ ಹೋದನು ಅಲ್ಲಿ ಪಂಡಿತನ ಸ್ನೇಹಿತನನ್ನು ನೋಡಲು ರಾಜನು ಭಾವಿಸಿದ್ದಂತೆ ದುಃಖಪಡದೆ ಅವನು ಸಂತೋಷಪಡುತ್ತ ' ಅವನು ಬಂದುಬಿಡುವನು ಬೇಗ ನನ್ನನ್ನು ಕರೆದುಕೊಂಡು ಹೋಗಿ ಶೂಲಕ್ಕೆ ಹಾಕಿಬಿಡಿ ' ಎಂದು ಆತುರ ಪಡಿಸುತ್ತಿದ್ದನು ಆ ಮನುಷ್ಯನನ್ನು ನೋಡಿ ಆಶ್ಚರ್ಯಪಟ್ಟು ರಾಜನು, ಆ ಮನುಷ್ಯನನ್ನು ಕರೆದು ಈ ನಿನ್ನ ಸಂತೋಷಕ್ಕೂ ಸಾಯುವುದಕ್ಕೆ ನೀನು ಆತುರ ಪಡುತ್ತಿರುವುದಕ್ಕೂ ಕಾರಣವೇನೆಂದು ಕೇಳಲು, ' ಅಯ್ಯಾ ರಾಜನೆ ! ಅವನು ಪಂಡಿತ, ಲೋಕೋಪಕಾರಿ , ನನ್ನ ಪ್ರಾಣಕ್ಕಿಂತಲೂ ಅವನದು ಉಪಯೋಗಕರವಾದುದು , ನನ್ನ ಪ್ರಾಣವನ್ನು ಕೊಟ್ಟು ಅಂತಹ ಪ್ರಾಣವನ್ನು ಉಳಿಸುವೆನೆಂಬುದೇ ನನ್ನ ಸಂತೋಷಕ್ಕೆ ಕಾರಣ ಆತುರಕ್ಕೆ ಕಾರಣವೇನೆಂದರೆ, ನನ್ನ ಮಿತ್ರನು ನೀರಿನ ಮೇಲೆ ಬರಬೇಕು ನಿನ್ನೆಯವರೆಗೂ ಗಾಳಿ ಸರಿಯಾಗಿ ಬೀಸುತ್ತಿರಲಿಲ್ಲ ನಿನ್ನೆಯಿಂದಲೂ ಪಯಣಕ್ಕೆ ಅನುಕೂಲವಾಗಿ ಗಾಳಿ ಬೀಸುತ್ತಿದೆ ನನ್ನ ಮಿತ್ರನು ಬಂದು ಸೇರುವುದು ಖಂಡಿತ ಅವನು ಬರುವುದಕ್ಕೆ ಮುಂದೆಯೇ ನಾನು ಸತ್ತಿರಬೇಕೆಂಬುದೆ ನನ್ನ ಆತುರಕ್ಕೆ ಕಾರಣ ' ಎಂದನು

ಶೂಲವು ಸಿದ್ಧವಾಯಿತು ಜನರು ನೆರೆದಿದ್ದರು ರಾಜನೂ ಬಹು ಅಟ್ಟಹಾಸದಿಂದ ಕುಳಿತಿದ್ದನು ಈ ಸ್ನೇಹಿತನು ಶೂಲದ ಕೆಳಗೆ ನಿಂತು, ತಾನು ಸಂತೋಷದಿಂದ ಸಾಯುವೆನೆಂದು ಹೇಳಿ, ಶೂಲಕ್ಕೆ ಎತ್ತೆಂದು ಹೇಳುತ್ತಿದ್ದನು. ಅಷ್ಟರಲ್ಲಿಯೇ–ನಿಲ್ಲಿ ! ನಿಲ್ಲಿ ! ಎಂಬ ಶಬ್ದವು ಕೇಳಬಂದಿತು ಜನರೆಲ್ಲರೂ–ನಿಲ್ಲಿ, ನಿಲ್ಲಿ,–ಎಂದು ಕೂಗಿಕೊಂಡರು ಕುದುರೆಯ ಹೊಟ್ಟೆಯು ನೆಲ ತಾಕುವಷ್ಟು ವೇಗವಾಗಿ ಓಡಿಸಿಕೊಂಡು ಕೂಗುತ್ತಲೇ ಬರುತ್ತಿದ್ದ ಪಂಡಿತನನ್ನು ನೋಡಿದರು. ಪಂಡಿತನು ತಟ್ಟನೆ ಕುದುರೆಯಿಂದ ಇಳಿದು ' ಅಯ್ಯಾ, ನೀನು ಸುಖವಾಗಿದ್ದೀಯಲ್ಲ , ಇದೇ ನನಗೆ ಸಂತೋಷ ' ಎಂದನು ಆಗ ' ಅಯ್ಯೋ ! ಹಾಳು ಕುದುರೆಯೆ , ನೀನು ಇಷ್ಟು ವೇಗವಾಗಿ ಏಕೆ ಬಂದೆ ? ನಿನ್ನ ವೇಗವೇ ಮೃತ್ಯುವಾಯಿತಲ್ಲ ' ಎಂದು ಅವನ ಮಿತ್ರನು ಪಶ್ಚಾತ್ತಾಪ ಪಡುತ್ತಿದ್ದನು

ಇವೆರಡನ್ನೂ ಕೇಳಿ ಆಶ್ಚರ್ಯಪಟ್ಟ ಆ ಕ್ರೂರ ರಾಜನ ಮನಸ್ಸು ಕರಗಿ, ' ಅಯ್ಯಾ, ನೀವಿಬ್ಬರೂ ಸುಖವಾಗಿ ಬಾಳಿ , ಸ್ನೇಹವೆಂದರೆ ಇಂತಹುದು ಎಂದು ತಿಳಿದುಕೊಳ್ಳಲು ನೀವೇ ಸಾಕ್ಷ್ಯವಾಗಿ ಬಹುಕಾಲ ಬದುಕಿ ' ಎಂದು ಅವನ ಜೀವನದಲ್ಲಿ ಅದುವರೆಗೂ ತೋರಿಸದಿದ್ದ ದಯೆಯನ್ನು ಅಂದು ಆ ಇಬ್ಬರು ಸ್ನೇಹಿತರಲ್ಲಿ ತೋರಿಸಿದನು ಜನರೆಲ್ಲರೂ ಆಶ್ಚರ್ಯದಿಂದ ಆ ಸ್ನೇಹವನ್ನು ಹೊಗಳುತ್ತ ಮನೆಗೆ ಹೊರಟು ಹೋದರು

## ೬೨. ಗ್ರೇಸ್ ಡಾರ್ಲಿಂಗ್

ಹಿಂದಣ ಕಾಲದಲ್ಲಿ ಸಮುದ್ರದ ಮೇಲೆ ಹೋಗುವುದು ಬಹಳ ಅಪಾಯಕ್ಕೆ ಈಡಾಗಿದ್ದಿತು ಆಗ ಇನ್ನೂ ಚೆನ್ನಾಗಿ ಸಮುದ್ರ ಮಾರ್ಗವನ್ನು ಶೋಧಿಸಿರಲಿಲ್ಲ ಎಲ್ಲಿ ಬಂಡೆಗಳಿರುವುವು, ಎಲ್ಲಿ ಮಳಲ ದಿಣ್ಣೆ ಇರುವುದು, ಎಂಬುದು ಯಾವುದೂ ಜನರಿಗೆ ಗೊತ್ತಿರಲಿಲ್ಲ ಹಡಗುಗಳು ಆಗಾಗ ಬಂಡೆಗೆ ತಗುಲಿ ಒಡೆದುಹೋಗುತಿದ್ದುವು, ಮಳಲಿನಲ್ಲಿ ಹೂತುಕೊಳ್ಳುತಿದ್ದುವು ಇಂತಹ ಅಪಾಯಗಳನ್ನು ತಪ್ಪಿಸುವುದಕ್ಕೆ ಕೆಲವು ಕಾಲಾನಂತರ ಅಲ್ಲಲ್ಲಿಯೇ ಬಂಡೆಗಳ ಮೇಲೆ, ಕಿಚ್ಚನ್ನು ಹೊತ್ತಿಸುತ್ತಿದ್ದರು ಈಗ ಎತ್ತರವಾದ ಗೋಪುರಗಳನ್ನು ಕಟ್ಟಿ ಬಲವಾದ ದೀಪವನ್ನು ಇಡುವರು ಇಂತಹ ದೀಪದ ಮನೆಗೆ ' ಬೆಳಕಿನ ಗೂಡು ' ಎಂದು ಹಸರು

ಸಮುದ್ರದ ಮಧ್ಯೇ ಇದ್ದ ಒಂದಾನೊಂದು ಅಂತಹ ದೀಪದ ಮನೆಯಲ್ಲಿ ಒಬ್ಬ ಮುದುಕನು ದೀಪವನ್ನು ಹೊತ್ತಿಸುವುದಕ್ಕೆ ಇದ್ದನು ಅವನಿಗೆ ಗ್ರೇಸ್ ಡಾರ್ಲಿಂಗ್ ಎಂಬ ಒಬ್ಬಳೇ ಮಗಳು ಇದ್ದಳು ಒಂದು ದಿನ ಮಧ್ಯರಾತ್ರಿ, ಗಾಢಾಂಧಕಾರ, ಗುಡುಗು, ಮಿಂಚು, ಸಿಡಿಲುಗಳ ಅಬ್ಬರ, ಪಟಪಟನೆ ಬೀಳುತ್ತಿರುವ ಆಲಿಕಲ್ಲುಗಳ ಮಳೆ, ಬಿರುಗಾಳಿ, ಆ ರಾತ್ರಿಯಲ್ಲಿ ಆ ಗಾಳಿ ಮಳೆಯಲ್ಲಿ ಆ ಗುಡುಗು ಸಿಡಿಲಿನಲ್ಲಿ ' ಓ, ಎಂದು ಅಳುವ ಧ್ವನಿಯೊಂದು ಗ್ರೇಸ್‌ಡಾರ್ಲಿಂಗಿಗೆ ಕೇಳಬಂದಿತು

ಆಗ ಮಗಳು ತಂದೆಯನ್ನು ಎಬ್ಬಿಸಿ, ' ಅಪ್ಪಾ, ಈ ಕಾಳ ರಾತ್ರಿಯಲ್ಲಿ ಯಾರೋ ಅಳುವಂತಿದೆ, ಎಂದಳು ' ಅದು ಅಳುವ ಕೂಗಲ್ಲ, ಬಿರುಗಾಳಿಯ ಕೂಗು, ಸುಮ್ಮನೆ ಮಲಗಿಕೋ ' ಎಂದು ತಂದೆಯು ಹೇಳಿದನು ಅದು ಮನುಷ್ಯನ ಆರ್ತಧ್ವನಿಯೇ ಎಂದು ಡಾರ್ಲಿಂಗಳ ಮನಸ್ಸಿಗೆ ಚೆನ್ನಾಗಿ ಹೊಳೆದಿದ್ದರೂ ಆ ಕತ್ತಲೆಯಲ್ಲಿ ಯಾರು ತಾನೆ ಏನು ಮಾಡಬಲ್ಲರು ? ಸಮುದ್ರವು ಕೋಪಾಟೋಪದಿಂದ ಆರ್ಭಟಿಸುತ್ತಿದ್ದಿತು ಹಾಗೆಯೇ ಬೆಳಗಾಯಿತು ಬೆಳಗಾದ ಮೇಲೂ ಸಣ್ಣಸಣ್ಣ ಹನಿ ಬೀಳುತ್ತಿದ್ದುದರಿಂದ ಚೆನ್ನಾಗಿ ಕಾಣಲು ಅವಕಾಶವಿಲ್ಲದೆ ಸ್ವಲ್ಪ ದೂರದಲ್ಲಿ ಯಾವುದೋ ಮುರಿದ ಹಡಗಿನ ತುದಿಯಮೇಲೆ ಕೆಲವು ಮಂದಿ ನಿಂತಿದ್ದಂತೆ ಕಾಣಬಂದಿತು

ಅವರನ್ನು ನೋಡಿದೊಡನೆಯೆ ಮುಳುಗಿ ಹೋಗುವಂತಿರುವ ಆ ಜನರನ್ನು ಹೇಗಾದರೂ ಉಳಿಸಿಕೊಂಡು ಬರಬೇಕೆಂದು ಮಗಳು ತಂದೆಗೆ ಹೇಳಿದಳು ಅಲ್ಲಿದ್ದ ದೋಣಿಯಾದರೋ ಒಂದು ಸಣ್ಣ ದೋಣಿ ಅದೂ ಹಳೆಯದು ಸಮುದ್ರವಾದರೋ ಭಯಂಕರವಾಗಿದ್ದಿತು ಅಲೆಗಳಾದರೋ ಆನೆಯಾನೆ ಎತ್ತರವಾಗಿ ಮೇಲೆ ಮೇಲೆ ಬರುತ್ತಿದ್ದುವು ಗಾಳಿಯಂತೂ ಒಂದೇ ಸಮನಾಗಿ ಬೀಸುತ್ತಿದ್ದಿತು ಮತ್ತೆ ದೊಡ್ಡ ದೊಡ್ಡ ಹನಿಯು ಬೀಳುವುದಕ್ಕೆ ಆರಂಭವಾಯಿತು ಆ ಸಮಯದಲ್ಲಿ ಯಾರು ತಾನೇ ಸಮುದ್ರದ ಮೇಲೆ ಒಂದು ಹಳೆಯ ದೋಣಿಯಲ್ಲಿ ಹೊರಡಲಪೇಕ್ಷಿಸುವರು ? ಅನುಭವಶಾಲಿಯಾದ ಆ ತಂದೆಗೆ ಧೈರ್ಯವಿರಲಿಲ್ಲ ಆಗ ಮಗಳು 'ನಾವು

ಸತ್ತರೂ ಸಾಯೋಣ, ನಡೆ ಅವರನ್ನು ಬಿಡಿಸುವ ಪ್ರಯತ್ನ ಮಾಡೋಣ' ಎಂದಳು. ಮಗಳಿಗೆ ಸುಮಾರು ಇಪ್ಪತ್ತು ಇಪ್ಪತ್ತೆರಡು ವರ್ಷ ತಂದೆಗೆ ಆ ಮಗಳಲ್ಲಿ ಬಹಳ ಪ್ರೀತಿ ಏನು ಮಾಡಿಯಾನು ? ಆ ದೋಣಿಯನ್ನೆ ಸಿದ್ಧಮಾಡಿದನು ಮಗಳು ಹೂಟೆಯನ್ನು ತೆಗೆದುಕೊಂಡು ಹೊರಟಳು ಪ್ರತಿಭಟಿಸುತ್ತಿರುವ ತರಂಗ ತತಿಗಳನ್ನು ಶಿಕ್ಷಿಸಲು ಹೊರಟಿರುವ ಸಮುದ್ರ ಲಕ್ಷ್ಮಿಯಂತೆ ಹೂಟಿಯಿಂದ ಅಲೆಗಳನ್ನು ತಳ್ಳುತ್ತ, ತಂದೆಯೊಡನೆ ದೋಣಿಯನ್ನು ನಡಿಸಿಕೊಂಡು ಒಂದು ಮೈಲಿ ದೂರದಲ್ಲಿದ್ದ ಆ ಜನರ ಸಹಾಯಕ್ಕೆ ಒರುತ್ತಿದ್ದಳು

ತಮ್ಮ ದೋಣಿಯು ಹೋಗಿ ಒಂಡೆಗೆ ಬಡಿದು ಎಲ್ಲಿ ಛಿದ್ರವಾಗುವುದೋ ಎಂದು ತಂದೆಯು ನಡುಗುತ್ತಿದ್ದನು ತಮ್ಮ ಪ್ರಾಣವನ್ನು ಉಳಿಸುವುದಕ್ಕೆ ಬರುತಿರುವ ತಂದೆ ಮಕ್ಕಳಿಬ್ಬರನ್ನೂ ದೇವರು ಹೇಗಾದರೂ ಕಾಪಾಡಲಿ ಎಂದು ಅವರು ದೇವರಿಗೆ ಮೊರೆಯಿಡುತ್ತಿದ್ದರು ದೋಣಿಯು ಬಂದಿತು ಅಲ್ಲಿ ಒಂಬತ್ತು ಮಂದಿ ಗಂಡಸರನ್ನೂ ಗಾಳಿಯ ಪೆಟ್ಟನ್ನೂ ಮಳೆಯ ಹೊಡೆತವನ್ನು ಸಹಿಸಲಾರದೆ ಮೂರ್ಛೆ ಹೋಗುತ್ತಿದ್ದ ಒಬ್ಬ ಹಂಗಸನ್ನೂ ಬಹು ಉಪಾಯವಾಗಿ ದೋಣಿಗೆ ಕರೆದುಕೊಂಡು ಅಲ್ಲಿದ್ದ ಇಬ್ಬರು ನಾವಿಕರ ಸಹಾಯದಿಂದ ದೀಪದ ಮನೆಯನ್ನು ಸೇರಿದರು ಅಲ್ಲಿ ಆ ಕನ್ಯೆಯು ಅವರನ್ನು ಬಹುವಾಗಿ ಉಪಚರಿಸಿದಳು ಎಲ್ಲರೂ ಕೆಲವು ದಿನದಲ್ಲಿ ಸುಖವಾದರು. ಅವಳ ಸಾಹಸವೂ ಕೀರ್ತಿಯೂ ಎಲ್ಲೆಲ್ಲೂ ಹರಡಿಕೊಂಡುವು

---

## ೬೩ ಶಿಬಿ ಚಕ್ರವರ್ತಿಯ ಕಥೆ

ಬಹುಕಾಲದ ಹಿಂದೆ ಶಿಬಿ ಚಕ್ರವರ್ತಿಯು ಬಹು ಸತ್ಯದಿಂದ ರಾಜ್ಯವನ್ನು ಆಳುತ್ತಿದ್ದನು ಅವನು ಸತ್ಯವಂತನೆಂದು ಎಲ್ಲೆಲ್ಲೂ ಗೊತ್ತಾಗಿದ್ದಿತು ಹೀಗಿರುವಾಗ ಒಂದು ದಿನ ಆ ಚಕ್ರವರ್ತಿಯ ಸತ್ಯವನ್ನು ಪರೀಕ್ಷಿಸಬೇಕೆಂದು, ದೇವತೆಗಳಾದ ಇಂದ್ರ, ಅಗ್ನಿ ಇವರಿಬ್ಬರೂ ಹೊರಟರು ಇಂದ್ರನು ಬೇಗ ಗಿಡುಗನಾದನು ಅಗ್ನಿಯು ಪಾರಿವಾಳ ಪಕ್ಷಿಯ ವೇಷವನ್ನು ತಾಳಿದನು ಒಡನೆಯೆ ಗಿಡುಗವು ಪಾರಿವಾಳವನ್ನು ಅಟ್ಟಿಕೊಂಡು ಹೊರಟಿತು ಪಾರಿವಾಳವು ಬೇಗ ಬಂದು ಶಿಬಿ ಚಕ್ರವರ್ತಿಯ ಬೆನ್ನು ಬಿದ್ದು, 'ನನ್ನನ್ನು ಹೇಗಾದರೂ ಆ ಗಿಡುಗನಿಂದ ಕಾಪಾಡು' ಎಂದಿತು ಅದಕ್ಕೆ ಶಿಬಿಯು 'ಹೆದರಬೇಡ ! ನಿನ್ನ ಪ್ರಾಣಕ್ಕೆ ಪ್ರತಿಯಾಗಿ ನನ್ನ ಪ್ರಾಣವನ್ನಾದರೂ ಕೊಟ್ಟು ನಿನ್ನನ್ನು ಕಾಪಾಡುವೆನು' ಎಂದನು

ಅಷ್ಟರಲ್ಲಿಯೇ ಗಿಡುಗವು ಬಂದಿತು ರಾಜನ ಹಿಂದೆ ಪಾರಿವಾಳವಿದ್ದುದನ್ನು ನೋಡಿ, ರಾಜನಿಗೆ ನಮಸ್ಕರಿಸಿ, 'ಅಯ್ಯಾ ! ಮಹಾರಾಜನೆ ! ನೀನು ಸತ್ಯಸಂಧನೆಂದು ಎಲ್ಲರೂ ಹೇಳುವರು ಪಾರಿವಾಳವನ್ನು ತಿನ್ನುವುದೇ ನನ್ನ ಜೀವನ. ನಾನು ಬಹುವಾಗಿ ಹಸಿದಿರುತ್ತೇನೆ ನಾನು ಅಟ್ಟಿಕೊಂಡು ಬಂದ ಆಹಾರವು ನಿನ್ನ ಮರ ಬಿದ್ದಿರುತ್ತದೆ ಅದನ್ನು ನನಗೆ ಬಟ್ಟುಕೊಟ್ಟು ನನ್ನನ್ನು ಕಾಪಾಡು' ಎಂದಿತು.

ಅದಕ್ಕೆ ಚಕ್ರವರ್ತಿಯು, 'ಗಿಡುಗನೆ! ಮರೆಬಿದ್ದವರನ್ನು ಕಾಪಾಡುವುದು ರಾಜನ ಧರ್ಮ ಪಾರಿವಾಳವು ನನ್ನ ಬೆನ್ನು ಬಿದ್ದಿರುವುದು ಅದರ ಪ್ರಾಣವನ್ನು ಉಳಿಸುವೆನೆಂದು ನಾನು ಮಾತು ಕೊಟ್ಟಿರುವೆನು. ನಾನು ಅದನ್ನು ಬಿಡಲು ಆಗು ವುದಿಲ್ಲ ನೀನು ಬೇರೆ ನೋಡಿಕೋ ಅದು ಆಗದಿದ್ದರೆ ನೀನು ಬಹಳ ಹಸಿದಿರುವು ದರಿಂದ ನಿನಗೆ ಬೇಕಾದಷ್ಟು ಮಾಂಸವನ್ನು ಕೊಡಿಸುವೆನು, ತಿಂದು ತೃಪ್ತನಾಗಿ ಹೊರಟುಹೋಗು' ಎಂದನು

ಆ ಗಿಡುಗವು 'ಮಹಾರಾಜನೆ! ನಿನ್ನ ಮಾತೇನೋ ಒಪ್ಪತಕ್ಕುದಾಗಿದೆ ಆದರೆ ನನಗೆ ಆ ಪಾರಿವಾಳದ ಮಾಂಸಕ್ಕಿಂತ ನೀನು ತರಿಸಿಕೊಡುವ ಮಾಂಸವು ರುಚಿಯಾಗಿದ್ದೀತೆ, ಎಂದಿಗೂ ಇರಲಾರದು ನೀನು ಏನಾದರೂ ಆ ಪಾರಿವಾಳ ವನ್ನು ಕಾಪಾಡಬೇಕೆಂದು ಇದ್ದಲ್ಲಿ ಸುಖವಾಗಿ ಬೆಳದಿರುವ ನಿನ್ನ ಶರೀರದಿಂದ ಅದರ ತೂಕ ಮಾಂಸವನ್ನು ಕೊಡು, ನಾನು ತಿಂದು ತೃಪ್ತನಾಗಿ ಆ ಪಾರಿವಾಳ ವನ್ನು ಬಿಟ್ಟು ಹೋಗುವೆನು' ಎಂದಿತು

ಶಿಬಿಯು ಈ ಸಲಹೆಯು ಬಹು ಚೆನ್ನಾಗಿದೆಯೆಂದು ಒಪ್ಪಿ 'ಅಗತ್ಯವಾಗಿ ಆಗಲಿ, ಪಾರಿವಾಳವೆ ಹೀಗೆ ಬಾ' ಎಂದು, ಬೇಗನೆ ಒಂದು ತಕ್ಕಡಿಯನ್ನು ತರಿಸಿ ಪಾರಿವಾಳವನ್ನು ಒಂದುಕಡೆ ಇಟ್ಟು ಪಟ್ಟದ ಕತ್ತಿಯಿಂದ ತನ್ನ ಮೈಯನ್ನು ತುಂಡುತುಂಡುಮಾಡಿ ಸಂತೋಷದಿಂದ ಆ ತುಂಡುಗಳನ್ನು ಇನ್ನೊಂದು ಕಡೆಗೆ ಹಾಕುತ್ತ ಬಂದನು ಎಷ್ಟು ಹಾಕಿದರೂ ಸಣ್ಣದಾಗಿದ್ದ ಆ ಪಾರಿವಾಳದ ತೂಕಕ್ಕೆ ಇವನ ಶರೀರದ ತುಂಡುಗಳು ಸಾಲದೆ ಹೋದುವು ಆಗ ಚಕ್ರವರ್ತಿಯು ತನ್ನ ಶಿರಸ್ಸನ್ನೇ ಕತ್ತರಿಸಿ ತೂಕಕ್ಕೆ ಹಾಕುವೆನೆಂದು ಕುತ್ತಿಗೆಗೆ ಕತ್ತಿಯನ್ನು ಹಾಕಿದನು

ಪಕ್ಷಿವೇಷವನ್ನು ತಾಳಿದ್ದ ಇಂದ್ರನೂ ಅಗ್ನಿಯೂ ತತ್‌ಕ್ಷಣವೇ ದೇವತೆ ಗಳಾಗಿ ನಿಂತು, ಚಕ್ರವರ್ತಿಯ ಕೈಯನ್ನು ಹಿಡಿದು, 'ಅಯ್ಯಾ, ಮಹಾರಾಜನೆ! ನಿನ್ನ ಸತ್ಯಕ್ಕೆ ನಾವು ಮೆಚ್ಚಿದೆವು ನಿನ್ನನ್ನು ಪರೀಕ್ಷಿಸಲು ನಾವು ಗಿಡುಗ ಪಾರಿ ವಾಳಗಳಾಗಿ ಬಂದವು ನೀನು ಸತ್ಯಸಂಧ' ಎಂದು ಹೇಳಿ ಮಾಯವಾದರು

---

## ೬೪. ಮಾತೃಭಕ್ತಿ

ಪ್ರಷ್ಯಾ ದೇಶವನ್ನು ಆಳಿದ ರಾಜಾಧಿರಾಜ ಫ್ರೆಡ್ರಿಕ್ ಮಹಾರಾಜನ ವಿಷಯ ವಾಗಿ ಒಂದೆರಡು ಕಥೆಗಳನ್ನು ನೀವು ಕೇಳಿರಬಹುದು ಈ ದಿನ ಹೇಳುವ ಈ ಕಥೆ ಯನ್ನು ನೀವು ಕೇಳಿದರೆ ಅವನು ಮಹಾರಾಜನೆನಿಸಿಕೊಳ್ಳುವುದಕ್ಕೆ ತಕ್ಕವನೆಂದು ನಿಮಗೆ ತೋರಿಬರುವುದು ಆ ಮಹಾರಾಜನ ಸೇವೆಯಲ್ಲಿ ಅನೇಕ ಜನರಿದ್ದ ರೆಂಬುದೇನಾಶ್ಚರ್ಯ? ಬಲುಮಂದಿ ಇದ್ದರು ಆ ರಾಜನು ಕುಳಿತು ಕೆಲಸ ಮಾಡುತ್ತಿದ್ದ ಕೊಟಡಿಯ ಬಾಗಿಲಲ್ಲಿ ಯಾವಾಗಲೂ ಒಬ್ಬನು ಇರುತ್ತಲೇ

ಇದ್ದನು ಬಾಗಿಲಲ್ಲಿರುವ ಆಳನ್ನು ಕರೆಯಬೇಕಾದರೆ, ಮಹಾರಾಜನು ಕೂಗು ತ್ತಿರಲಿಲ್ಲ, ಹತ್ತಿರ ಇದ್ದ ಒಂದು ಗಂಟೆಯನ್ನು ಹೊಡೆಯುತ್ತಿದ್ದನು ನಮ್ಮ ದೇಶದಲ್ಲಿಯೂ ಈಗ ಈಗ ಈ ಪದ್ಧತಿಯು ವಾಡಿಕೆಗೆ ಬಂದಿದೆ ಗಂಟೆಯನ್ನು ಹೊಡೆದೊಡನೆಯೆ ಬಾಗಿಲಲ್ಲಿರುವ ಸೇವಕನು ಬರುತ್ತಿದ್ದನು.

ಒಂದು ದಿನ ಫ್ರೆಡ್ರಿಕನು ಗಂಟೆಯನ್ನು ಹೊಡೆದನು ಸೇವಕನು ಬರಲಿಲ್ಲ. ಗಂಟೆಯನ್ನು ಮತ್ತೆ ಮತ್ತೆ ಹೊಡೆದನು, ಆದರೂ ಒಬ್ಬ ಸೇವಕನೂ ಬರಲಿಲ್ಲ. ಆಗ ರಾಜನು ತಾನೇ ಹೊರಕ್ಕೆ ಬಂದು ನೋಡಿದನು ಅಲ್ಲಿ, ಸೇವಕನಾದ ಹುಡುಗನೊಬ್ಬನು ಮಲಗಿಕೊಂಡು ನಿದ್ರೆಹೋಗುತ್ತಿದ್ದನು ಅವನನ್ನು ಎಚ್ಚರಿಸಲು ಹೋಗಿ ಆ ಹುಡುಗನ ಅಂಗಿಯ ಜೇಬಿನಲ್ಲಿ ಕಾಣಿಸುತ್ತಿದ್ದ ಒಂದು ಕಾಗದವನ್ನು ರಾಜನು ನೋಡಿ ಅದರಲ್ಲಿ ಏನು ಬರೆದಿರುವುದೋ ತಿಳಿಯಬೇಕೆಂದು ಆ ಕಾಗದವನ್ನು ಮೆಲ್ಲನೆ ತೆಗೆದುಕೊಂಡು ಓದಿ ನೋಡಿದನು ಅದು ಮಗು ನೀನು ಕಳುಹಿಸಿದುದು ಬಂದು ತಲಪಿತು ಮುಕ್ಕಾಲು ಪಾಲು ಸಂಬಳವನ್ನು ನನಗೇ ಕಳುಹಿಸಿ ನೀನು ಎಷ್ಟು ಕಷ್ಟ ಪಡುವೆಯೋ ನಾನು ಕಾಣೆ! ನೀನು ನಿಜವಾದ ಮಾತೃಭಕ್ತನು ದೇವರು ನಿನಗೆ ಮಂಗಳ ಮಾಡಲಿ, ಎಂದು ತಾಯಿಯು ಮಗನಿಗೆ ಹರಸಿ ಬರೆದು ಕಳುಹಿಸಿದ ಕಾಗದವಾಗಿದ್ದಿತು ಫ್ರೆಡ್ರಿಕನು ಕಾಗದವನ್ನು ಓದಿ ಅಲ್ಲಿ ಮಲಗಿದ್ದ ಮಾತೃಭಕ್ತನಾದ ಆ ಬಾಲಕನನ್ನು ನೋಡಿ ಸಂತೋಷಪಟ್ಟು ಒಳಕ್ಕೆ ಹೋಗಿ ನಾಣ್ಯತುಂಬಿ ಒಂದು ಸಣ್ಣ ಚೀಲವನ್ನು ತಂದು ಆ ಕಾಗದವನ್ನೂ ಆ ಚೀಲವನ್ನೂ ಅವನಿಗೆ ಎಚ್ಚರವಾಗದಂತೆ ಅವನ ಜೇಬಿನಲ್ಲಿಟ್ಟು ಒಳಕ್ಕೆ ಹೋಗಿ ಗಂಟೆಯನ್ನು ಬಲವಾಗಿ ಹೊಡೆಯುತ್ತ ಕುಳಿತುಕೊಂಡನು.

ಹುಡುಗನಿಗೆ ಎಚ್ಚರವಾಯಿತು ತಪ್ಪದೆ ಮೇಲೆ ಮೇಲೆ ಗಂಟೆಯನ್ನು ರಾಜನು ಹೊಡೆಯುತ್ತಿದ್ದುದನ್ನು ಕೇಳಿ ಒಡನೆಯೆ ರಾಜಸನ್ನಿಧಿಗೆ ಓಡಿಹೋದನು. 'ನಿನಗೆ ಚೆನ್ನಾಗಿ ನಿದ್ರೆಯಾಯಿತೆ?' ಎಂದು ರಾಜನು ಕೇಳಲು ಹುಡುಗನು ಬೆಪ್ಪಾಗಿ ಏನೂ ತೋರದೆ ನಿಂತನು ಹಾಗೆಯೆ ಹುಡುಗನ ಕೈಯು ಜೇಬನ್ನು ಸೋಕಿತು ಜೇಬಿನಲ್ಲಿ ಏನೋ ಗಟ್ಟಿಯಾಗಿದ್ದಂತೆ ತೋರಿತು ಒಡನೆಯೇ ಜೇಬು ಭಾರವಾಗಿದೆಯೆಂಬುದೂ ತಿಳಿಯಿತು ಹುಡುಗನು ಜೇಬಿನಲ್ಲಿ ಕೈಯನ್ನು ಹಾಕಿನೋಡಲು ಹಣದ ಚೀಲವು ಸಿಕ್ಕಿತು ಆಗ ಹುಡುಗನು ಭಯದಿಂದ ಗಡ ಗಡನೆ ನಡಗುತ್ತ ಮಾತನಾಡಲಾರದೆ ಅಳುತ್ತ ರಾಜನಿದಿರಿಗೆ ನಿಂತನು

'ಎಲೆ! ಹುಡುಗ! ಏತಕ್ಕೆ ಹೀಗೆ ಅಳುತ್ತೀಯೆ? ಹೇಳು, ಎಂದು ರಾಜನು ಕೇಳಿದನು ಆಗ ಹುಡುಗನು ರಾಜನಿದಿರಿಗೆ ನೆಲದ ಮೇಲೆ ಮೊಳಕಾಲನ್ನೂರಿ* ನಿಂತು ಕೈ ಮುಗಿದು ಕಣ್ಣೀರು ಬಿಡುತ್ತ ಮಾತನಾಡಲಾರದೆ 'ಮಹಾ ಪ್ರಭು! ಕ್ಷಮಿಸಬೇಕು ಯಾರೋ ನನಗೆ ಆಗದವರು ನನ್ನನ್ನು ಹಾಳುಮಾಡುವುದಕ್ಕಾಗಿ

---

* (ನಮ್ಮ ದೇಶದಲ್ಲಿ ರಾಜರಿಗೆ ಅಡ್ಡ ಬೀಳುವರು ಆ ದೇಶದಲ್ಲಿ ವೀರಮಂ ಡಿಯನ್ನು ಬಿಟ್ಟಂತೆ ಮೊಳಕಾಲನ್ನು ಊರುವರು.)

ನಾನು ಮೈ ಮರೆತು ನಿದ್ರೆಹೋಗುತ್ತಿದ್ದಾಗ ನನ್ನದಲ್ಲದ ಈ ಹಣದ ಚೀಲವನ್ನು ನನ್ನ ಜೇಬಿನಲ್ಲಿ ಹಾಕಿ ನನ್ನ ಮೇಲೆ ಕಳವು ತಪ್ಪು ಹೊರಿಸಬೇಕೆಂದಿರುತ್ತಾರೆ.' ಎಂದು ಹೇಳುತ್ತಿದ್ದನು ಹಾಗೆಯೇ ಆ ಹುಡುಗನ ಮೈಯಲ್ಲಿ ಕಡುಬೆವರಿಟ್ಟಿತು. ತುಟಿ ಬೆಳ್ಳಗಾಯಿತು ಮೈನಡುಕ ಹಚ್ಚಿತು

ಆ ಹುಡುಗನ ಮಾತೃಭಕ್ತಿಗೆ ಮೆಚ್ಚಿದ ಆ ರಾಜನಿಗೆ ಅವನ ಸತ್ಯಮಾರ್ಗವನ್ನು ನೋಡಿ ಅವನಲ್ಲಿ ಮೊದಲಿಗಿಂತಲೂ ಹೆಚ್ಚಾದ ವಿಶ್ವಾಸವುಂಟಾಯಿತು ಆಗ ರಾಜನು,—' ಹೆದರಬೇಡ! ನಿನ್ನ ಸತ್ಯಕ್ಕೂ, ನಿನಗಿರುವ ಮಾತೃಭಕ್ತಿಗೂ ದೇವರು ಮೆಚ್ಚಿ ನಿನಗೆ ಒಳ್ಳೆಯದನ್ನೇ ಮಾಡುವನು ಅದಕ್ಕೆ ಇದೇ ಮೊದಲೆಂದು ತಿಳಿ ಆ ಹಣವನ್ನು ನಿನ್ನ ತಾಯಿಗೆ ಕಳುಹಿಸು ಅವಳಿಗೆ ನನ್ನ ನಮಸ್ಕಾರವನ್ನು ತಿಳಿಸಿ, ಇಂದು ಮೊದಲ್ಗೊಂಡು ನಾನು ಅವಳ ಮತ್ತು ನಿನ್ನ ಸಂರಕ್ಷಣೆಯ ಭಾರವನ್ನು ವಹಿಸಿರುವೆನೆಂದು ಬರೆದು ಕಳುಹಿಸು'—ಎಂದನು

---

## ೭೫ ಸಾಲಮನ್ನಿನ ಬುದ್ಧಿವಂತಿಕೆ

ಸಾಲಮನ್ನನು ಬಹು ಬುದ್ಧಿವಂತನೆಂದು ಪ್ರಸಿದ್ಧನು ಅವನ ಬುದ್ಧಿವಂತಿಕೆಯನ್ನು ಪರೀಕ್ಷಿಸಬೇಕೆಂದು ಮಗ್ಗುಲ ದೇಶವನ್ನು ಆಳುತ್ತಿದ್ದ ರಾಣಿಯೊಬ್ಬಳು ಎರಡು ಕೈಗಳಲ್ಲೂ ಎರಡು ಹಾರಗಳನ್ನು ಹಿಡಿದುಕೊಂಡು, ಸಾಲಮನ್ನನು ಓಲಗದಲ್ಲಿ ಕುಳಿತಿದ್ದಾಗ ಸಿಂಹಾಸನದ ಬಳಿಗೆ ಬಂದು ನಿಂತಳು ಅವಳು ಹಿಡಿದಿದ್ದ ಎರಡು ಹಾರಗಳಲ್ಲಿ ಒಂದು ಒಳ್ಳೆಯ ಹೂವಿನ ಹಾರವೆಂದೂ ಇನ್ನೊಂದು ಹೂವಿನ ಹಾರದಂತೆ ಕಾಗದದಲ್ಲಿ ಮಾಡಿದ ಹಾರವೆಂದೂ ಆ ಸಾಲಮನ್ನನು ಬಹುಬೇಗ ಗೊತ್ತುಮಾಡಿದನು ಆದರೆ ಅವೆರಡೂ ಒಂದೇ ತರನಾಗಿದ್ದುದರಿಂದ ಅವುಗಳಲ್ಲಿ ಯಾವುದು ನಿಜವಾದ ಹೂವಿನಲ್ಲಿ ಮಾಡಿದುದು ಯಾವುದು ಕಾಗದದ ಹೂವಿನಲ್ಲಿ ಮಾಡಿದುದು ಎಂಬುದನ್ನು ಬೇಗ ತಿಳಿಯಲು ಆಗಲಿಲ್ಲ ಸಾಲಮನ್ನನೂ ಸ್ವಲ್ಪ ಅನುಮಾನ ಮಾಡತೊಡಗಿದನು ಅವನ ಓಲಗದಲ್ಲಿದ್ದವರೆಲ್ಲರೂ ದೊರೆಯು ಹಂಗಸಿಗೆ ಸೋಲುವನೆಂದು ಕಳವಳಪಡುತ್ತಿದ್ದರು

ಅಷ್ಟರಲ್ಲಿಯೇ ಸಾಲಮನ್ನನು ಓಲಗದ ಒಂದು ಮೂಲೆಯಲ್ಲಿದ್ದ ಕಿಟಕಿಯ ಹಿಂದೆ ಜೇನು ಗೂಡನ್ನು ಕಂಡನು ಅದನ್ನು ನೋಡಿದೊಡನೆಯೇ ಸಾಲಮನ್ನಿನ ಮುಖವು ಹಿಗ್ಗಿತು. ಆಗ ಸಾಲಮನ್ನನು ' ಸೆಕೆ ಆಗುತ್ತಿರುವುದು, ಆ ಕಿಟಕಿಯ ಬಾಗಿಲನ್ನು ತೆರೆ ' ಎಂದನು ಚಾರರು ಕಿಟಕಿಯ ಬಾಗಿಲನ್ನು ತೆರೆದರು ಜೇನು ಹುಳುಗಳು ಒಳಕ್ಕೆ ನುಗ್ಗಿ ಪರಿಮಳದಿಂದ ತುಂಬಿದ ಹೂವಿನ ಮಾಲೆಗೆ ಮುತ್ತಿದುವು ಕಾಗದದ ಮಾಲೆಯ ಕಡೆಗೆ ಒಂದು ಹುಳುವೂ ಸುಳಿದಾಡಲಿಲ್ಲ ಆಗ ಆ ರಾಣಿಯು ಸಾಲಮನ್ನಿನ ಪಾದಕ್ಕೆರಗಿ ಹಾರವನ್ನು ಒಪ್ಪಿಸಿ ರಾಜನ ಬುದ್ಧಿವಂತಿಕೆಯನ್ನು ಕೊಂಡಾಡುತ್ತ ಹೊರಟುಹೋದಳು.

## ೬೬ ಪರಮಾನಂದ ಶಿಷ್ಯರ ಕಥೆ

ಕೃಷ್ಣಾನದಿಯ ತೀರದಲ್ಲಿ ಒಂದು ಮಠ. ಆ ಮಠದಲ್ಲಿ ಒಬ್ಬರು ಗುರುಗಳೂ ಐದುಮಂದಿ ಶಿಷ್ಯರೂ ಇದ್ದರು ಆ ಐದುಮಂದಿ ಶಿಷ್ಯರಿಗೂ, ಮರುಳ, ಮಂಕ, ಮುಟ್ಠಾಳ, ಮಡೆಯ, ಮಡ್ಡಿ, ಎಂಬ ಬಿರುದುಗಳಿದ್ದುವು. ಇವರೇ ಆ ಗುರುಗಳ ಪರಮಾನಂದ ಶಿಷ್ಯರು ಆ ಗುರು ಶಿಷ್ಯರ ಚರಿತ್ರೆಯು ಬಹು ದೊಡ್ಡದಾಗಿರುವುದು ಈ ದಿನ ನಿಮಗೆ ಅವರ ಚರಿತ್ರೆಯಲ್ಲಿ ಒಂದು ಸಣ್ಣ ಕಥೆಯನ್ನು ಹೇಳುತ್ತೇನೆ, ಚೆನ್ನಾಗಿ ಕೇಳಿ.

ಆ ಮಠದಲ್ಲಿ ಒಂದು ಹಸು ಒಂದು ದಿನ ಮೇವುದಕ್ಕೆ ಹೋಗಿತ್ತು ಆ ಹಸು ಎಂದಿನಂತೆ ಸಂಜೆಯಲ್ಲಿ ಮಠಕ್ಕೆ ಹಿಂದಿರುಗಿ ಬರಲಿಲ್ಲ ಶಿಷ್ಯರು ಅದು ಇಲ್ಲದ ಎಡೆಯಲ್ಲೆಲ್ಲ ಹುಡಿಕಿ, ಮಠಕ್ಕೆ ಹಿಂದಿರುಗಿ ಬಂದು ' ಸ್ವಾಮಿ ಗುರುವೇ, ಆಕಳು ಸಿಕ್ಕಲಿಲ್ಲ ಅದು ಹೋದರೆ ಹೋಗಲಿ ಸ್ವಲ್ಪ ಬೆಲೆಗೇ ನಮಗೆ ಜಾತಿ ಕುದುರೆ ಸಿಕ್ಕುವುದು ಅದನ್ನು ತೆಗೆದುಕೊಳ್ಳೋಣ ' ಎಂದು ಬಹಳ ಸಂತೋಷದಿಂದ ಕುಣಿದಾಡುತ್ತ ಹೇಳಿದರು ಕುದುರೆಯಿಲ್ಲದೆ ಕಷ್ಟಪಡುತ್ತಿದ್ದ ಆ ಗಾಂಪರೊಡಯರು ' ಅದು ಹೇಗೆ ? ಎಂದು ಬಹು ಆಸೆಯಿಂದ ಕೇಳಲು, ಶಿಷ್ಯರಲ್ಲಿ ಬಲು ಗಟ್ಟಿಗನಾದ ಮುಟ್ಠಾಳನು, " ಗುರುವೆ ! ತಪ್ಪಿಸಿಕೊಂಡು ಹೋದ ಆಕಳನ್ನು ಹುಡುಕಲಿಕ್ಕೆ ಊರಿಂದೂರಿಗೆ, ಕಾಡಿಂದ ಕಾಡಿಗೆ, ಹೊಲದಿಂದ ಹೊಲಕ್ಕೆ, ಗದ್ದೆಯಿಂದ ಗದ್ದೆಗೆ, ತೋಟದಿಂದ ತೋಟಕ್ಕೆ ತಿರುಗಿ ತಿರುಗಿ ತೊಳಲಿ ಬಳಲಿ ಬೇಸತ್ತು ಬರುತ್ತಿರುವಾಗ ತಮ್ಮ ಕಟಾಕ್ಷದ ಮಹಿಮೆಯಿಂದ ಒಂದು ದೊಡ್ಡ ಕೆರೆಯುರುಗಿನಲ್ಲಿ ನಾಲ್ಕು ಐದು ಕುದುರೆಗಳು ಮೇಯುತ್ತಿದ್ದುದನ್ನು ಕಂಡೆನು ಹತ್ತಿರಕ್ಕೆ ಹೋಗುತ್ತ ಹೋಗುತ್ತ ನಾನು ಹಿಂದೆ ಎಂದೂ ಕಾಣದ ಎರಡು ಕೈಗಳಿಂದಲೂ ತಬ್ಬುವುದಕ್ಕಾಗದೆ ಇದ್ದ ಕುದುರೆ ಮೊಟ್ಟೆಗಳನ್ನು ಕಂಡೆನು ಅವು ಕುದುರೆ ಮೊಟ್ಟೆಗಳೋ ಅಲ್ಲವೋ ಎಂಬ ಸಂದೇಹವುಂಟಾಗಿ ಅಲ್ಲಿದ್ದ ಒಬ್ಬ ಒಕ್ಕಲಿಗನನ್ನು ಕೇಳಲು ಅವನು ಕುದುರೆ ಮೊಟ್ಟೆಗಳೇ ಎಂದೂ ಬಲೆ ಹೆಚ್ಚಾಗಿಲ್ಲ, ಒಂದೊಂದಕ್ಕೆ ನಾಲ್ಕು ಐದು ರೂಪಾಯಿಗಳು ಮಾತ್ರವೇ ಎಂದೂ ಹೇಳಿದನು ಸ್ವಾಮಿ ! ಮಡ್ಡಿಯರೆಡ್ಡಿ ! ಇದು ಒಳ್ಳೆಯ ವೇಳೆ ಬಿಡಲಾಗದು ಅಪ್ಪಣೆಯಾದರೆ ತಂದುಬಿಡುತ್ತೇನೆ " ಎಂದನು

ಆಗ ಆ ಗುರುವು ಪರಮಾನಂದ ಶಿಷ್ಯರೊಡನಾಲೋಚಿಸಿ ಒಂದು ನಿಮಿಷವೂ ತಡಮಾಡದೆ ಕೊಂಡು ಕೊಂಡು ಬರುವಂತೆ ಹಣವನ್ನು ಕೊಟ್ಟು ಮುಟ್ಠಾಳನನ್ನೂ ಮರುಳನನ್ನೂ ಕಳುಹಿಸಿ ಉಳಿದ ಶಿಷ್ಯರೊಡನೆ ಆ ಮೊಟ್ಟೆಗೆ ಸೇಕ ಕೊಡುವ ಬಗೆ ಹೇಗೆ ? ಮರಿ ಮಾಡುವ ರೀತಿ ಎಂತು ? ಎಂದಾಲೋಚಿಸುತ್ತ ಬಗೆ ಹರಿಯದೆ ಕಣ್ಣುಬಿಟ್ಟು ಒಬ್ಬರನ್ನೊಬ್ಬರು ನೋಡದಂತೆ ಬಾಯಿ ಬಿಟ್ಟು ಮಾತನಾಡದಂತೆ ಸುಮ್ಮನೆ ಕುಳಿತು ಇದ್ದರು

ಹೀಗೆ ಇವರು ಕುಳಿತಿರಲು ಮೂರನೆಯ ಜಾವದಲ್ಲಿ ತಿಂಗಳು ಮೂಡಿದ ಕೂಡಲೆ ಮುಟ್ಠಾಳನೂ ಮರುಳನೂ ಹೊರಟು ಎರಡೂವರೆ ಗಾವುದ ನಡೆದು ಕುದುರೆ ಮೊಟ್ಟೆಗಳಿದ್ದ ಕೆರೆಯ ಏರಿಯ ಮೇಲೆ ನಿಂತರು ಆಗ ಅಲ್ಲಿದ್ದ ಒಕ್ಕಲಿಗನ ಬಳಿಗೆ ಹೋಗಿ 'ಅಪ್ಪಾ! ಅಣ್ಣಾ! ಈ ಕುದುರೆ ಮೊಟ್ಟೆಗಳಲ್ಲಿ ಒಂದನ್ನು ನಮಗೆ ಬೆಲೆಗೆ ಕೊಡಬೇಕು ಹೇಗಾದರೂ ಮಾಡಿ ಒಂದನ್ನು ಕೊಡಯ್ಯಾ' ಎಂದು ಬೇಡಿಕೊಂಡರು ಬೂದುಗುಂಬಳಕಾಯಿಯನ್ನು ನೋಡಿ ಕುದುರೆ ಮೊಟ್ಟೆ ಎಂದು—ಕುದುರೆ ಮೊಟ್ಟೆ ಇಡುವುದು ಉಂಟೆ!—ತಿಳಿದ ಈ ಮುಟ್ಠಾಳರನ್ನು ನೋಡಿ, ಓಹೋ! ಈ ಜಾತಿ ಕುದುರೆ ಮೊಟ್ಟೆಗೆ ಆಗುವ ಬೆಲೆಯನ್ನು ನೀವು ಕೊಟ್ಟೀರಾ! ಸುಮ್ಮನೆ ದಾರಿ ಹಿಡಿದುಕೊಂಡು ಹೋಗಿ, ಅಯ್ಯನವರೆ!' ಎಂದನು ಅದಕ್ಕೆ ಅವರು 'ಇದೋ ನೋಡು! ನಾವೇನು ದುಡ್ಡಿಲ್ಲದ ವ್ಯಾಪಾರಮಾಡುವರೆಂದು ತಿಳಿದೆಯೋ! ಈ ರೂಪಾಯಿಗಳನ್ನು ತೆಗೆದುಕೊಂಡು ನಿನಗೆ ಮನಸ್ಸು ಬಂದುದು ಒಂದನ್ನು ಕೊಡು' ಎಂದರು

ಅದಕ್ಕೆ ಆ ಒಕ್ಕಲಿಗನು ಮುಟ್ಠಾಳರೆಂದರೆ ಇವರೇ ಸರಿ, ಎಂದು 'ಅಯ್ಯನವರೆ! ನೀವು ಒಳ್ಳೆಯ ಗೃಹಸ್ಥರಂತೆ ಕಾಣುತ್ತೀರಿ ನಿಮ್ಮಲ್ಲಿ ಬೇರೆ ನೀವು ತೋರಿಸಿದ ಹಣವಲ್ಲದೆ ಹೆಚ್ಚಾಗಿ ಇಲ್ಲವೆಂದು ತೋರುತ್ತದೆ ನಿಮ್ಮನ್ನು ನೋಡಿದರೆ ನೀವು ಬಹುದೂರದಿಂದ ನಡೆದುಕೊಂಡು ದಣಿದು ಬಂದವರಂತೆ ಇದೆ ನಿಮ್ಮನ್ನು ಹಾಗೆಯೇ ಕಳುಹಿಸಬಾರದು ನೀವು ತಂದಿರುವ ಹಣಕ್ಕೇ ಕೊಡುತ್ತೇನೆ ನೀವು ಇಷ್ಟು ಅಗ್ಗವಾಗಿ ತೆಗೆದುಕೊಂಡೆವೆಂದು ಒಬ್ಬರಲ್ಲಿಯೂ ಹೇಳಬಾರದು, ನೋಡಿ, ಈಗಲೇ ಹೇಳಿರುತ್ತೇನೆ ನಿಮಗೆ ಬೇಕಾದುದನ್ನು ಆರಿಸಿ ತೆಗೆದುಕೊಂಡು ಹೋಗಿ' ಎಂದನು ಈ ಮುಟ್ಠಾಳರು ಬಹು ಸಂತೋಷದಿಂದ ಒಂದು ದೊಡ್ಡ ಮೊಟ್ಟೆಯನ್ನು ತೆಗೆದುಕೊಂಡು ನೂರು ನೂರೈವತ್ತು ರೂಪಾಯಿ ಬಾಳುವ ಈ ಮೊಟ್ಟೆಯನ್ನು ಇಷ್ಟು ಅಗ್ಗವಾಗಿ ಕೊಟ್ಟ ಆ ಒಕ್ಕಲಿಗನೇ ಮುಟ್ಠಾಳನೆಂದುಕೊಂಡು, ಮರದ ಕಡೆಗೆ ಒಂದೇ ಓಟ ಓಡಿದರು

ಹಳ್ಳಕೊಳ್ಳ ಬಿದ್ದು ಸಂತೋಷದಿಂದ ಓಡುತ್ತಿದ್ದಾಗ, ಇಕ್ಕಟ್ಟಾದ ದಾರಿಯಲ್ಲಿ ಬಾಗಿ ಅಡ್ಡವಾಗಿ ಬಂದಿದ್ದ ಒಂದು ಮರದ ಕೊಂಬೆಗೆ ತಗುಲಿ ಮುಟ್ಠಾಳನ ತಲೆಯಮೇಲಿದ್ದ ಬೂದುಗುಂಬಳಕಾಯಿ ಜಾರಿ ಕೆಳಗಿದ್ದ ಒಂದು ಬಂಡೆಯ ಮೇಲೆ ಬಿದ್ದು ಒಡೆದುಹೋಯಿತು ಆಗ ಆ ಬಂಡೆಯ ಪೊಟರೆಯಲ್ಲಿ ಹುದುಗಿಕೊಂಡಿದ್ದ ಒಂದು ಮೊಲವು ಬೆಚ್ಚಿ ಅಂಜಿಕೊಂಡು ಓಡಿಹೋಯಿತು ಅದನ್ನು ನೋಡಿ ಅವರು 'ಅದೋ! ಮೊಟ್ಟೆಯೊಳಗಿದ್ದ ಕುದುರೆ ಮರಿ ಓಡಿಹೋಗುತ್ತದೆ!' ಎಂದು ಕೂಗಿಕೊಂಡು ಅದನ್ನು ಹಿಡಿಯುವುದಕ್ಕೆ ಗಿಡ, ಬಳ್ಳಿ, ಹಳ್ಳ, ತಿಟ್ಟು, ಕಲ್ಲು, ಮುಳ್ಳು ಯಾವುದನ್ನೂ ನೋಡದೆ ಇಬ್ಬರೂ ಹಿಂದಟ್ಟಿ ಓಡಿದರು. ಆ ಕುದುರೆಯ ಮರಿಯು ಈ ಮುಟ್ಠಾಳರ ಕೈಗೆ ಸಿಕ್ಕುವುದೆ? ಅದನ್ನಟ್ಟಿಕೊಂಡು ಓಡುವುದರಲ್ಲಿ ಉಟ್ಟ ಬಟ್ಟೆ ಹರಿದು ಚೂರುಚೂರಾಗಿ ಹೋಯಿತು ಮುಳ್ಳುಗಳು

ಗೀರಿ ಮೈಕೈಯೆಲ್ಲ ರಕ್ತವಾಯಿತು. ಕಲ್ಲುಗಳು ಒತ್ತಿ ಕಾಲುಗಳೆಲ್ಲ ಬಾತು ಹೋದುವು. ಹೀಗೆಯೇ ಬಹುದೂರ ಓಡಿದ ಆಯಾಸದಿಂದ ಅವರಿಗೆ 'ಕರುಳು ಅಲ್ಲಾಡಿತು ಕಾಲು ನಡುಗಿತು ನಾಲಗೆ ಒಣಗಿತು ಕಿವಿ ಮುಚ್ಚಿಹೋಯಿತು ಬಾಯಾರಿಕೆ ಹೆಚ್ಚಿತು ' ಇಷ್ಟಾದರೂ ಆ ಮೊಲವು ಕೈಗೆ ಸಿಕ್ಕದೆ ಬಹು ದೂರ ಓಡಿ ಕಣ್ಣಿಗೆ ಕಾಣದೆ ಮರೆಯಾಯಿತು ಅಷ್ಟಕ್ಕೆ ಸಂಜೆಯಾಯಿತು. ನಿಲ್ಲಲಿಕ್ಕೆ ಎಡೆಯಿಲ್ಲದೆ ಊಟದ ಹೊತ್ತಿಗೆ ಮಠಕ್ಕೆ ಬಂದು ಸೇರಿದರು.

ಮಠದ ಬಾಗಿಲು ಹಾಕಿರಲು ' ಅಯ್ಯಯ್ಯಪ್ಪೊ ! ಎಂದು ಕೂಗಿಕೊಂಡು ಬಾಗಿಲಲ್ಲಿ ಬಿದ್ದರು ಆಗ ಆಲೋಚನೆ ಇನ್ನೂ ಬಗೆಹರಿಯದೆ ಸುಮ್ಮನೆ ಕುಳಿತಿದ್ದ ಗುರು ಶಿಷ್ಯರು ದಿಗಿಲುಬಿದ್ದು ತಟ್ಟನೆ ಓಡಿಬಂದು ಬಾಗಿಲನ್ನು ತೆರೆದು ಇವರನ್ನು ಕೈಹಿಡಿದೆತ್ತಿ ' ಏನಾಯಿತು ? ಏನಾಯಿತು ? ' ಎಂದು ಕೇಳಲು ನೀರನ್ನು ಬಿಟ್ಟರೆ ಮಾತನಾಡುವೆವು, ಎಂದು ಬಾಯಿ ಬಾಯಿ ಬಿಟ್ಟರು ಆಗ ಅವರನ್ನು ಉಪಚರಿಸಿ ಕೇಳಲು ನಡೆದುದನ್ನೆಲ್ಲ ಹೇಳಿ ' ಅಷ್ಟು ವೇಗವಾದ ಕುದುರೆಯನ್ನು ನಾವು ನೋಡಿದುದಿಲ್ಲ ಅದು ಕಪ್ಪೊಡನೆ ಸೇರಿದ ಬೂದಿಯ ಬಣ್ಣವಾಗಿ ಎತ್ತರದಲ್ಲಿಯೂ ಗಾತ್ರದಲ್ಲಿಯೂ ಮೊಲಕ್ಕೆ ಸಮನಾಗಿ ಒಂದು ಮೊಳದಷ್ಟು ಉದ್ದವಾಗಿ ಇನ್ನೂ ಮೊಟ್ಟೆಯೊಳಗೆ ಕಡೆದು ಕೊಂಡಿರುವ ಮರಿಯಾಗಿದ್ದರೂ ಎರಡು ಕಿವಿಗಳನ್ನೂ ಅಗಲಿಸಿಕೊಂಡು ಎರಡು ಬೆರಲಷ್ಟುದ್ದವಾದ ಮೋಟು ಬಾಲವನ್ನೆತ್ತಿಕೊಂಡು, ನೆಲಕ್ಕೆ ಎದೆ ತಗಲುವಂತೆ ನಾಲ್ಕು ಕಾಲುಗಳನ್ನೂ ನೀಡಿ ಓಡಿತು ಹಾಗೆ ಓಡಿದ ಕುದುರೆಯ ಮರಿಯನ್ನು ನಾವು ಕಂಡೂ ಇಲ್ಲ, ಕೇಳಿಯೂ ಇಲ್ಲ ' ಎಂದರು

ಆಗ ಗುರುಗಳಿಗೆ ಆಲೋಚನೆಯು ಬಗೆಹರಿಯಲು ಶಿಷ್ಯರ ಕಡೆ ತಿರುಗಿ ಐದು ರೂಪಾಯಿ ಹೋದುದಲ್ಲದೆ ಕುದುರೆಯ ಮರಿಯೂ ಹೋಯಿತಲ್ಲಾ ಎಂದು ನೀವು ಅಳಬೇಡಿ ಕುದುರೆ ಹೋದರೆ ಪೀಡೆಯೇ ಹೋಯಿತು ಮರಿಯಾಗಿರುವಾಗಲೆ ಹೀಗೆ ಓಡಿದ ಕುದುರೆಯು ದೊಡ್ಡದಾದಮೇಲೆ ಇನ್ನು ಹೇಗೆ ಓಡೀತೊ ! ನಾನು ಮುದುಕ. ಅದು ನನ್ನ ಕೈಗೆ ಸಿಕ್ಕುತಿದ್ದಿತೆ ! ಎಂದಿಗೂ ಇಲ್ಲ ಅಂತಹ ಕುದುರೆಯನ್ನು ಸುಮ್ಮನೆ ಕೊಟ್ಟರೂ ಬೇಡ. ಎಲ್ಲರೂ ಊಟಕ್ಕೆ ಏಳಿ ? ಎಂದರು. *

---

## ೬೭. ರಾಜನೂ ವನಪಾಲಕನೂ

ಬಹುಕಾಲದ ಹಿಂದೆ ಇಂಗ್ಲೆಂಡ್ ದೇಶವನ್ನು ಆಳುತ್ತಿದ್ದ ರಾಜನೊಬ್ಬನು ಒಂದುದಿವಸ ಬೇಟೆಯಾಡಲು ತನ್ನ ಪರಿವಾರದೊಡನೆ ಹೊರಟನು. ಬೇಟೆಯಾಡುತಾಡುತ್ತ ಒಂದು ಹುಲ್ಲೆಯನ್ನು ಅಟ್ಟಿಕೊಂಡು ದಟ್ಟವಾದ ವನವನ್ನು ನುಗ್ಗಿದನು ಹುಲ್ಲೆಯು ತಪ್ಪಿಸಿಕೊಂಡಿತು ರಾಜನ ಜತೆಯಲ್ಲಿ ಬಂದ ಪರಿವಾರವೆಲ್ಲ ಹಿಂದೆ ನಿಂತಿತು ರಾಜನಿಗೆ ದಾರಿಯು ತಪ್ಪಿತು ಆಗ ರಾಜನು ಏನು ಮಾಡಬೇಕು,

---

* ಇದನ್ನು ಮ|| ರಾ|| ಶ್ರೀ|| ಆರ್. ನರಸಿಂಹಾಚಾರ್ಯರ್, ಎಂ ಎ., ಯವರ ನಗೆಗಡಲಿನಿಂದ ಸಂಗ್ರಹಿಸಿದೆ

ಮಹಾರಾಜನು ದಾರಿದಪ್ಪಿ ಕಾಡಿನಲ್ಲಿ ಅಲೆಯುತ್ತಿರುವನೆಂದು ಸೂರ್ಯನು ಏನಾದರೂ ಮುಳುಗದೆ ನಿಲ್ಲುವನೆ ? ರಾಜನಿಗೆ ಅಂಜಿ ಕತ್ತಲೆ ಕವಿದುಕೊಳ್ಳದೆ ಹಿಮ್ಮೆಟ್ಟುವುದೆ ? ಸೂರ್ಯನು ಮುಳುಗಿದನು ಸ್ವಲ್ಪ ಹೊತ್ತಿನಲ್ಲಿಯೇ ಕತ್ತಲೆಯೂ ಕವಿದುಕೊಂಡಿತು. ದಿಕ್ಕು ಕಾಣದ ಆ ರಾಜನಿಗೆ " ತಾವು ರಾಜಾಧಿರಾಜರು, ತಮಗೆ ಇದಿರೇ ಇಲ್ಲ , ತಮ್ಮ ಬುದ್ಧಿಗೆ ಸಮನಾದ ಬುದ್ಧಿಯುಳ್ಳವರು ಯಾರಾದರೂ ಉಂಟೆ ! '' ಎಂದು ಹೊಗಳುತ್ತಿದ್ದ ತಮ್ಮ ಪರಿವಾರದವರ ಮಾತು ಆಗ ಜ್ಞಾಪಕಕ್ಕೆ ಬಂದು ಏನು ! ನನಗೆ ಇದಿರೇ ಇಲ್ಲವೆ , ನನ್ನನ್ನು ಕಂಡು ಇಲ್ಲಿರುವ ನಾಯಿ ನರಿಗಳು ಕೂಡ ಮೇಲೆ ಬೀಳುತಿರುವುವಲ್ಲ ! ನನ್ನ ಬುದ್ಧಿಯೆ ? ಮಂತ್ರಿಗಳಿದ್ದರಲ್ಲವೆ ನನ್ನ ಬುದ್ಧಿಯೆಂಬುದು ಈ ಕಗ್ಗತ್ತಲೆಯಲ್ಲಿ ಇದು ಉತ್ತರ ಇದು ದಕ್ಷಿಣ ಎಂಬುದೂ ನನಗೆ ತಿಳಿಯದಲ್ಲಾ ! ನನ್ನ ಪರಾಕ್ರಮ, ನನ್ನ ದೊಡ್ಡತನ, ನನ್ನ ರೂಪು ಇವೆಲ್ಲ ಪರಿವಾರದೊಡನೆ ಕೂಡಿ ಭಟ್ಟರಾಜರಿಂದ ಹೊಗಳಸಿಕೊಳ್ಳುತ್ತ ಸಿಂಹಾಸನವನ್ನು ಬಹು ಅಟ್ಟಹಾಸದಿಂದ ನಾನು ಅಲಂಕರಿಸಿದಾಗ ಕೇಳುವ ಮಾತಾಗಿದೆ ಇಲ್ಲಿ ನನ್ನನ್ನು ಲಕ್ಷ್ಯಮಾಡುವರು ಯಾರು , ನನ್ನ ದೊಡ್ಡತನವು ಎಲ್ಲಿಹೋಯಿತು ? ನನ್ನ ದೊರೆತನವು ಏನಾಯಿತು ? ಅಹ ! ಈಗ ತಾನೆ ನನ್ನ ನಿಜಗುಣವು ವ್ಯಕ್ತವಾಗುವುದು-ಎಂದಾಲೋಚಿಸುತ್ತ— ಇದೇನು ! ಎಲ್ಲಿಯೋ ತುಪಾಕಿಯ ಶಬ್ದವು ಕೇಳಿಬರುವಂತಿದೆ, ಎಂದು ಕಿವಿಗೊಟ್ಟು ಕೇಳಿ ಯಾರೋ ಬರುತಿರುವ ಶಬ್ದವೂ ಕೇಳಿಬರುತಿದೆ. ಈಗ ನಾನು ಮಾಡುವುದು ಏನು ? ನಾನು ದೊರೆಯಾದರೆ ನನ್ನನ್ನು ನೋಡದಿರುವವನು ಹೇಗೆ ತಾನೆ ನಂಬು ವನು ? ನನ್ನ ದೊಡ್ಡತನವು ಈಗ ನನ್ನನ್ನು ಕಾಯುವುದೇ ? ಕಾಯಲಾರದು ದೊಡ್ಡತನವನ್ನು ಈಗ ಒಂದು ಕಡೆಯಲ್ಲಿ ಕಟ್ಟಿಟ್ಟು ಸಾಮಾನ್ಯ ಜನದಂತೆ ನಟಿಸಿ, ನಾನು ಹೇಗೆ ಪಾರಗಾಣುವೆನೋ ನೋಡೋಣ—ಎಂದು ಆಲೋಚಿಸುತ್ತಿದ್ದನು

ವನ ಪಾಲಕ —ಕಳ್ಳ ! ಕಳ್ಳ ! ಕಳ್ಳನು ನುಗ್ಗಿರುವಹಾಗಿದೆ.

ರಾಜ.—ಕಳ್ಳನಲ್ಲ—ನಿಜವಾಗಿಯೂ ಅಲ್ಲ

ವನ ಪಾಲಕ —ಓಹೋ ! ಕಳ್ಳನಲ್ಲವೇ ? ಕಳ್ಳನಲ್ಲದಿದ್ದರೆ—ಒಳ್ಳೆಯದು ಆ ತುಪಾಕಿಯನ್ನು ಹಾರಿಸಿದವರು ಯಾರು ?

ರಾಜ.—ನಾನು ಬೇರೆ ಅಲ್ಲ

ವನ ಪಾಲಕ —ಸರಿ ! ಸರಿ ! ಕಳ್ಳನಲ್ಲ , ನೀನು ಸುಳ್ಳ

ರಾಜ —(ವನಪಾಲಕ ಕೇಳದಂತೆ) ಸುಳ್ಳ ! ಸುಳ್ಳನೆ ! ಹೀಗೆ ನನ್ನೊಡನೆ ಮಾತನಾಡಿದವರೇ ಇಲ್ಲವಲ್ಲಾ ಇದು ಎಂತಹ ಮಾತು ! (ವನಪಾಲಕನ ಕಡೆಗೆ ತಿರುಗಿ) ನನ್ನಾಣೆಗೂ ನಾನು ಸುಳ್ಳು ಹೇಳುವುದಿಲ್ಲ

ವನ ಪಾಲಕ —ಇರಲಿ, ಬಾ, ಬಾರಯ್ಯಾ, ನಿಜ ಹೇಳಿಬಿಡು , ನೀನು ನಮ್ಮ ರಾಜನ ಹುಲ್ಲೆಯೊಂದನ್ನು ಹೊಡೆದೆಯಲ್ಲವೆ ?

ರಾಜ —ನಾನು ನಿಜವಾಗಿಯೂ ಹೊಡೆಯಲಿಲ್ಲ ನಿನಗಿಂತಲೂ ಹೆಚ್ಚಾಗಿ ನನಗೆ ರಾಜನಲ್ಲಿ ಭಕ್ತಿಯಿದೆ ಗುಂಡು ಹೊಡೆದ ಶಬ್ದವನ್ನು ನಾನೂ ಕೇಳಿದೆನು ಕಳ್ಳರು ಕಾಕರು ಯಾರೋ ಇಲ್ಲಿ ಇರುವರೆಂಬ ಸಂದೇಹವು ನನಗೂ ಉಂಟಾಯಿತು

ವನ ಪಾಲಕ —ನೀನು ಹೇಳುವುದನ್ನು ನಾನು ನಂಬಬೇಕಾದ ಅಗತ್ಯವಿಲ್ಲ. ಒಳ್ಳೆಯದು, ನೀನು ಯಾರು ? ನಿನ್ನ ಹೆಸರೇನು ?''

ರಾಜ —ಹೆಸರೇ ?

ವನ ಪಾಲಕ —ಹು, ಹೆಸರು, ನಾಮಧೇಯ ! ಏಕೆ ನಿನಗೆ ಹೆಸರಿದೆ, ಇಲ್ಲವೆ ಏನು ? ನೀನು ಎಲ್ಲಿಂದ ಬಂದುದು ? ನಿನಗೆ ಏನು ಕೆಲಸ.

ರಾಜ.—ನನ್ನನ್ನು ಇಂತಹ ಪ್ರಶ್ನೆ ಕೇಳಿದವರೇ ಇಲ್ಲವಲ್ಲಯ್ಯ

ವನ ಪಾಲಕ —ನಿನ್ನಂತಹ ಗೃಹಸ್ಥನನ್ನು ಇಂತಹ ಪ್ರಶ್ನೆಗಳನ್ನು ಕೇಳುವವರು ಯಾರು ? ಆದರೆ ಯಾವ ಗೃಹಸ್ಥನೂ ಇಂತಹ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವುದಕ್ಕೆ ಹೆದರುವುದಿಲ್ಲ , ಆದುದರಿಂದ ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಟ್ಟು ನಿನ್ನ ವಿಚಾರವನ್ನೆಲ್ಲ ತಿಳಿಸಿದರೆ ಸರಿ , ಇಲ್ಲದಿದ್ದರೆ ನಿನ್ನನ್ನು ನನ್ನೊಡನೆ ಕರೆದುಕೊಂಡು ಹೋಗದೆ ಬಿಡೆನು

ರಾಜ —ನಿನ್ನೊಡನೆ ?—ನಿನಗೆ ಏನು ಅಧಿಕಾರ ?

ವನ ಪಾಲಕ —ನನಗೆ ?—ನನಗೆ ಮಹಾರಾಜನ ಅಪ್ಪಣೆ—ನನ್ನ ವಿಚಾರವನ್ನೆಲ್ಲ ಹೇಳುವೆನು. ಬೇಕಾದರೆ ಕೇಳು—ನನ್ನ ಹೆಸರು ಜಾರ್ಕ್ ಕಾಕಲ್ ಮಹಾರಾಜನಿಗೆ ಸೇರಿರುವ ಈ ವನಕ್ಕೆ ನಾನು ಪಾಲಕನು ನನಗೆ ತೃಪ್ತಿಕರವಾದ ಉತ್ತರವನ್ನು ಕೊಡದೆ, ನಿನ್ನಹಾಗೆ ಸಂಶಯಕ್ಕೆ ಆಸ್ಪದರಾದ ಯಾರನ್ನೂ ನಾನು ಇಲ್ಲಿಂದ ಬಿಡೆನ

ರಾಜ —(ಇತ್ತಲಾಗಿ) ನನ್ನ ಆಜ್ಞೆಯನ್ನು ನಾನೂ ಪುರಸ್ಕರಿಸಬೇಕಾದುದು ಧರ್ಮವಲ್ಲವೆ ? (ವನಪಾಲಕನ ಕಡೆಗೆ ತಿರುಗಿ) ಸಂತೋಷವಯ್ಯ ಸಂತೋಷ ನಮ್ಮ ಮಹಾರಾಜನ ಕಾರ್ಯದಲ್ಲಿ ನಿರತನಾದ ಇಂತಹ ಭೃತ್ಯನೊಬ್ಬನು ಇರುವುದನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತಿದೆ ಮಹಾರಾಜನ ಅಪ್ಪಣೆಯು ನಿನಗಿರುವಾಗ ನೀನು ದಯವಿಟ್ಟು ಕೇಳುವುದಾದರೆ ನನ್ನ ವೃತ್ತಾಂತವನ್ನು ನಿನಗೆ ತಿಳಿಸುವೆನು

ವನ ಪಾಲಕ —ನಿನ್ನ ಯೋಗ್ಯತೆಗೆ ಅದು ಹಚ್ಚೆಂದು ತೋರುತ್ತದೆ , ಆದರೂ ನೀನು ಏನು ಹೇಳುವೆಯೋ ಕೇಳೋಣ

ರಾಜ —ನೀನು ಹೇಗೋ ನಾನೂ ಹಾಗೆಯೇ ಮಹಾರಾಜನ ಕಡೆಯವನು. ಮಹಾರಾಜನ ಆಜ್ಞೆಗೆ ಕುಂದಕ ಬಂದುದನ್ನು ನೋಡುವುದರಲ್ಲಿ ನಿನಗೆ ಹೇಗೆ ಅಸಮಾಧಾನವೋ ನನಗೂ ಹಾಗೆಯೇ ಸರಿ ಈ ವನದಲ್ಲಿ ಬೇಟೆಯಾಡಲು ನಾನು ಮಹಾರಾಜನೊಡನೆ ಬಂದೆನು ಬೇಟೆಯು ಗಿಡಗಳೊಳಗೆ ನುಗ್ಗಲು ನಾನೂ ಅದರ ಬೆನ್ನಟ್ಟಿದೆನು ಆದಕಾರಣ ನನ್ನ ಜನರಿಂದ ಅಗಲಿ ನಾನು ಬಹುದೂರ ಬಂದೆನು ಅಷ್ಟರಲ್ಲಿಯೇ ಕತ್ತಲೆಯಾಯಿತು, ದಾರಿಯು ತಪ್ಪಿತು. ಇದೇ ನನ್ನ ವೃತ್ತಾಂತ

ವನ ಪಾಲಕ —ಇದೇನೋ ಸರಿಯಾಗಿ ತೋರುವುದಿಲ್ಲವಲ್ಲ. ನೀವು ಬೇಟೆಯಾಡಲು ಬಂದಿದ್ದರೆ ನಿಮ್ಮ ಕುದುರೆಯೆಲ್ಲಿ ? ಹೇಳಿ ಸ್ವಾಮಿ

ರಾಜ —ನನ್ನ ಕುದುರೆ ಓಡಿ ಓಡಿ ದಣಿದು ತಟ್ಟಾಗಿ ಬಿದ್ದುಹೋದುದರಿಂದ ಅದನ್ನು ಅಲ್ಲಿಯೇ ಬಿಡಬೇಕಾಗಿ ಬಂದಿತು

ವನಪಾಲಕ.—ಈ ಕಥೆಯನ್ನೂ ನಾನು ನಂಬಬೇಕಾಗಿದ್ದರೆ—

ರಾಜ—ನನಗೆ ಸುಳ್ಳು ಹೇಳುವ ಅಭ್ಯಾಸವೇ ಇಲ್ಲವಯ್ಯ.

ವನ ಪಾಲಕ —ಏನು ? ಆಸ್ಥಾನದಲ್ಲಿ ಇದ್ದೂ ಸುಳ್ಳು ಹೇಳುವುದಿಲ್ಲವೆ ? ಇದು ನಂಬುವ ಮಾತಾಗಿಲ್ಲ

ರಾಜ —ಅದು ಹೇಗಾದರೂ ಇರಲಿ, ನಾನೇನೋ ಈಗ ನಿಜವನ್ನೇ ಹೇಳು ತಿರುವೆನು ನನ್ನ ಮಾತನ್ನು ನಂಬು ನಾನು ಹೇಳುವುದು ನಿಜವೆಂದು ನಿನಗೆ ಒಪ್ಪಿಸ ಬೇಕಾದರೆ, ಇಲ್ಲಿಗೆ ಸಮೀಪವಾಗಿ ಪಟ್ಟಣ ಒಂದಿದ್ದರೆ ನಡೆ, ಅಲ್ಲಿಗೆ ಹೋಗೋಣ ಇಲ್ಲದಿದ್ದರೆ—ಈ ರಾತ್ರಿ ನಿನ್ನ ಮನೆಯಲ್ಲಿಯೇ ನನಗೆ ಸ್ವಲ್ಪ ಸ್ಥಳವನ್ನು ಕೊಡು ನಿನಗೆ ನಾನು ಕೊಡುವ ತೊಂದರೆಗಾಗಿ ಇದನ್ನು ತೆಗೆದುಕೋ (ಎಂದು) ಹಣದ ಚೀಲವನ್ನು ಕೊಡಲಿಕ್ಕೆ ಹೋಗುವನು ಇದು ಸಾಲದಿದ್ದರೆ ನಾಳೆಯ ಬೆಳಗಿನಲ್ಲಿ ಊರಿನಲ್ಲಿ ನಿನ್ನ ಮನಸ್ಸು ದಣಿಯುವಷ್ಟು ಕೊಡುವೆನು

ವನ ಪಾಲಕ —ನಿಜ ಕಾಣಯ್ಯ ನಿಜ, ಈಗಲೀಗ ನಿಜ ನೀವು ಆಸ್ಥಾನ ದಲ್ಲಿರತಕ್ಕವರೆಂಬುದು ನಿಸ್ಸಂದೇಹವಾಯಿತು ಇಲ್ಲಿ ಈಗ ಸ್ವಲ್ಪ ಲಂಚ, ನಾಳಗೆ ಇನ್ನೂ ಹೆಚ್ಚುವುದೆಂಬ ಆಶೆ, ಒಂದೇ ಉಸಿರಿನಲ್ಲಿ ಎರಡು ಮಾತು, ತೆಗೆದುಕೊಳ್ಳಿ, ತೆಗೆದುಕೊಳ್ಳಿ ಅದರೊಡನೆ ಇದನ್ನೂ ಕೊಳ್ಳಿ—ಜಾರ್ಜ್ ಕಾಕಲ್ಲನೇನೂ ಆಸ್ಥಾನದಲ್ಲಿ ಬಳೆದವನಲ್ಲ, ಲಂಚವನ್ನು ತೆಗೆದುಕೊಳ್ಳದೆಯೇ ಅವನು ತನ್ನ ಕೈಯಲ್ಲಾಗುವ ಸಹಾಯವನ್ನು ಮಾಡತಕ್ಕವನು

ರಾಜ —ನೀನು ಬಹು ದೊಡ್ಡ ಮನುಷ್ಯನಾಗಿ ಕಾಣುತ್ತೀಯೆ ನಿನ್ನಲ್ಲಿ ಬಳಕೆಯನ್ನು ಬಳಸಬೇಕೆಂದು ನನಗೆ ಬಹಳ ಕುತೂಹಲವುಂಟಾಗುತ್ತದೆ

ವನ ಪಾಲ —ಇನ್ನು ನೀನುತಾನನ್ನು ಸಾಕುಮಾಡಿ ಸ್ವಾಮಿ ! ನಾನೂ ನಿಮ್ಮ ಹಾಗೆಯೇ ಮರ್ಯಾದೆಯುಳ್ಳವನು. ಮರ್ಯಾದೆಯಲ್ಲಿ ಏನೋ ಕನಿಷ್ಠ ಪಕ್ಷ ನಿಮಗೆ ಸಮನಾಗಿಯೇ ಇರುವೆನು.

ರಾಜ —ಸ್ವಾಮೀ ! ನನ್ನನ್ನು ಕ್ಷಮಿಸಬೇಕು

ವನ ಪಾಲ —ಅಯ್ಯೋ ! ಅಷ್ಟು ದೊಡ್ಡಮಾತೇಕೆ ! ನನಗೇನೂ ಕೋಪವಿಲ್ಲ ಆದರೆ ಅಪರಿಚಿತಸ್ಥಳದಲ್ಲಿ ಒಬ್ಬರ ಯೋಗ್ಯತೆಯನ್ನು ಚೆನ್ನಾಗಿ ತಿಳಿಯುವುದಕ್ಕೆ ಮುಂದೆ ನೀನು ತಾನು ಎನ್ನುವಷ್ಟು ಸಲಿಗೆಯನ್ನು ಕೊಡಲು ನನಗೆ ಇಷ್ಟವಿಲ್ಲ

ರಾಜ —ನೀವು ಹೇಳುವುದು ನ್ಯಾಯ ಈಗ ನಾನು ಮುಂದೆ ಏನು ಮಾಡಬೇಕು ?

ವನ ಪಾಲಕ.—ನಿಮ್ಮ ಮನಸ್ಸು ಬಂದಂತೆ ಮಾಡಬಹುದು ಇಲ್ಲಿಂದ ಊರಿಗೆ ಹನ್ನೆರಡು ಮೈಲಿಗಳ ದೂರ—ಗಿಡದ ಮಧ್ಯೇ ಹೋಗಬೇಕು ನೀವು ಊರಿಗೇ ಹೋಗಬೇಕೆಂದರೆ ನನಗೆ ತೋರಿದ ಮಟ್ಟಿಗೆ ಸರಿಯಾದ ದಾರಿಯನ್ನು ತೋರಿಸಿ ಬಿಡುವೆನು, ಇಲ್ಲಿಯೇ ಇದ್ದುಕೊಂಡು,—ನಾನು ಬಡವ—ನಾನು

ಕೊಡುವ ಹಿಟ್ಟು ಸೊಪ್ಪನ್ನು ತೆಗೆದುಕೊಳ್ಳುವುದಾದರೆ ಬಹಳ ಸಂತೋಷ. ಹಾಗೆ ಮಾಡಬಹುದು, ಬೆಳಗಾದೊಡನೆಯೇ ನಾನೇ ನಿಮ್ಮೊಡನೆ ಊರಿಗೆ ಬಂದು ನಿಮ್ಮ ಗುರುತನ್ನು ಮಾಡಿಕೊಳ್ಳುವೆನು

ರಾಜ —ಈ ರಾತ್ರಿಯೇ ನನ್ನೊಡನೆ ಊರಿಗೆ ಬರುವುದಕ್ಕಾಗಲಾರದೆ ?

ವನ ಪಾಲಕ —ನೀವೇ ಮಹಾರಾಜರಾಗಿದ್ದರೂ ನಾನು ಬೇರೆ ಈ ರಾತ್ರಿ ನಿಮ್ಮೊಡನೆ ಬರಲಾರೆನು

ರಾಜ —ಹಾಗಾದರೆ ನಾನೇ ನಿಮ್ಮೊಡನೆ ಬರಬೇಕೆಂದು ಕಾಣುತ್ತದೆ (ಇಷ್ಟರಲ್ಲಿಯೇ ಒಬ್ಬ ಸರದಾರನು ಆತುರದಿಂದ ಓಡಿಬರುವನು )

ಸರದಾರ —-ಆಃ ! ಮಹಾಸ್ವಾಮಿಯವರಿಗೆ ಕ್ಷೇಮವಾಗಲಿ ! ತಮ್ಮನ್ನು ಹುಡುಕಿಕೊಂಡು ಕಾಡೆಲ್ಲ ಅಲೆದೆವು

ವನ ಪಾಲಕ —(ಇಂಗ್ಲೆಂಡ್ ದೇಶದ ಪದ್ಧತಿಯಂತೆ ಮೊಳಕಾಲನ್ನೂರಿ ಅಡ್ಡಬಿದ್ದು) ನನ್ನಿಂದ ಉಂಟಾದ ಅಪಚಾರಕ್ಕೆ ಮಹಾಸ್ವಾಮಿಯವರು ನನ್ನನ್ನು ಕ್ಷಮಿಸಬೇಕೆಂದು ಬೇಡುವೆನು (ರಾಜನು ಕತ್ತಿಯನ್ನು ಸೆಳೆಯುವನು ) ಸ್ವಾಮಿ ಕಾರ್ಯವನ್ನು ಅತ್ಯಾಸಕ್ತಿಯಿಂದ ಮಾಡಿದುದಕ್ಕಾಗಿ ಮಹಾಸ್ವಾಮಿಯವರು ನನ್ನನ್ನು ಕೊಲ್ಲುವದಿಲ್ಲವಷ್ಟೆ !

ರಾಜ —ನಿನ್ನನ್ನು ಎಂದಿಗೂ ಕೊಲ್ಲಲಾರೆನು. ಸ್ವಾಮಿಕಾರ್ಯ ಧುರಂಧರ— ಏನು ? ನಾನು ನಿನ್ನನ್ನು ಕೊಲ್ಲುವುದೇ ! ನಾನೇ ನಿನಗೆ ಕೃತಜ್ಞನಾಗಿರುವೆನು— ಸ್ವಾಮಿಕಾರ್ಯ ಪರಾಯಣನಾದ, ಸತ್ಯಸಂಧನಾದ ನಿನ್ನಂತಹ ಭೃತ್ಯರಲ್ಲವೇ ಮರ್ಯಾದಾರ್ಹರು ಏಳಯ್ಯಾ ಸರದಾರ್ ಕಾಕಲನೆ ಏಳು ಏಳು ನಿನ್ನ ಸ್ವಾಮಿಭಕ್ತಿಗೆ ಮೆಚ್ಚಿ ನಿನಗೆ ಈ ಬಿರುದನ್ನೂ ಸಹಸ್ರ ವರಹ ಬರುವ ಭೂಮಿಯನ್ನೂ ಕೊಟ್ಟಿರುವೆನು. ನೀನು ರಾಜ ಕಾರ್ಯವನ್ನು ನೆರವೇರಿಸುವುದರಲ್ಲಿ ಹೀಗೆಯೇ ಬದ್ಧಕಂಕಣನಾಗಿರು

---

## ೩೮. ಲೂಸಿಗ್ರೆ

ಸ್ಕಾಟ್‌ಲೆಂಡ್ ಎಂದು ಒಂದು ದೇಶವಿರುವುದು. ಆ ದೇಶದಲ್ಲಿ ಎಲ್ಲೆಲ್ಲಿ ನೋಡಿದರೂ ಬೆಟ್ಟ ಗುಡ್ಡಗಳು ಅಲ್ಲಲ್ಲಿಯೇ ಮನೋಹರವಾದ ಸರೋವರಗಳು. ಜನರು ಬೆಟ್ಟ ಗುಡ್ಡಗಳ ಮೇಲೆ ಅಲ್ಲಲ್ಲಿಯೇ ಮನೆಗಳನ್ನು ಕಟ್ಟಿಕೊಂಡು ವಾಸ ಮಾಡುತಿರುವರು ಒಂದಾನೊಂದು ಬೆಟ್ಟದ ಮೇಲೆ ಒಂದೇ ಒಂದು ಮನೆಯಿದ್ದಿತು ಅಲ್ಲಿ ಗಂಡ, ಹಂಡತಿ, ಒಂದು ಹೆಣ್ಣುಮಗು ಇವರು ವಾಸವಾಗಿದ್ದರು. ಅವರು ಬಲು ಬಡವರು

ಸಾಯಂಕಾಲ ಸಮಯ ತಂದೆಯು ಕೆಲಸವನ್ನು ಮಾಡಿ ಸಂಬಳವನ್ನು ತೆಗೆದುಕೊಂಡು ಬರುವ ಹೊತ್ತು. ಅಂದು ಮಾತ್ರ ಇನ್ನೂ ಬಂದಿರಲಿಲ್ಲ. ತಾಯಿಗೆ ಬಹುಜ್ವರ, ಮಗಳು ಹುಡುಗಿ , ಏನೂ ತಿಳಿಯದವಳು. ಏನು ಮಾಡು

ವುದಕ್ಕೂ ತಿಳಿಯದೆ ತಂದೆ ಬರುವುದನ್ನೇ ಇದಿರುನೋಡುತ್ತ ತಾಯಿಯ ಬಳಿ ಕುಳಿತಿದ್ದಳು. ಸುಮಾರು ಎಂಟು ಒಂಬತ್ತು ಗಂಟೆಯಿರಬಹುದು ತಂದೆಯು ಬಂದನು. ಹೆಂಡತಿಯು ಜ್ವರದಿಂದ ಸಂಕಟಪಡುತ್ತಿದ್ದುದನ್ನು ನೋಡಿದನು ಏನು ಮಾಡಿಯಾನು ? ಔಷಧವನ್ನು ತರಲಿಕ್ಕೆ ಪಂಡಿತರ ಮನೆಗೆ ತಾನು ಹೋದರೆ ಹೆಂಡತಿಯನ್ನು ಉಪಚರಿಸುವವರಿಲ್ಲ ಹೋಗದಿದ್ದರೆ ಔಷಧವನ್ನು ತರುವವರಿಲ್ಲ. ಹೇಗೆ ಮಾಡುವುದಕ್ಕೂ ತೋರದೆ ಚಿಂತಿಸುತ್ತಿದ್ದಾಗ ಆ ಹೆಣ್ಣುಮಗು ಬಂದು ' ಅಪ್ಪಾ ' ನೀನು ಚಿಂತಿಸಬೇಡ ನಾನು ಹೋಗಿ ಔಷಧವನ್ನು ತರುತ್ತೇನೆ. ನೀನು ಇಲ್ಲಿಯೇ ಇರು ' ಎಂದಳು.

ತಂದೆಯು ಆ ಹುಡುಗಿಯ ಮಾತಿಗೆ ಕಣ್ಣೀರನ್ನು ಸುರಿಸುತ್ತ, ' ನೀನು ಹೇಗೆ ಹೋಗುತ್ತೀಯಮ್ಮ ? ಕತ್ತಲೆ, ಹಿಮ ಸುರಿಯುತಿದೆ, ಬಹುದೂರ ದೇವರು ಮಾಡಿದುದು ಆಗಲಿ, ನಾನೇ ಬೆಳಗಿನಲ್ಲಿ ಹೋಗಿ ಔಷಧವನ್ನು ತರುತ್ತೇನೆ ' ಎಂದನು. ಅಷ್ಟರಲ್ಲಿಯೇ ತಾಯಿಯು ಹೆಚ್ಚಾಗಿ ಸಂಕಟಪಡುತ್ತಿದ್ದುದನ್ನು ನೋಡಿ, ಮಗಳು ಮತ್ತೆಬಂದು ' ಅಪ್ಪ ನಮ್ಮ ನಾಯಿಯನ್ನು ಕರೆದುಕೊಂಡು, ಲಾಂದ್ರವನ್ನು ಹಿಡಿದುಕೊಂಡು ನಾನೇ ಹೋಗಿ ಬರುತ್ತೇನೆ ' ಎಂದಳು ಹಂಡತಿಯ ಸಂಕಟವನ್ನು ನೋಡಲಾರದೆ ಒಪ್ಪಿದನು

ಮಗಳು ನಾಯಿಯನ್ನು ಕರೆದುಕೊಂಡು ಹೊರಟಳು ಅಲ್ಲಿಗೆ ಸ್ವಲ್ಪ ದೂರದಲ್ಲಿದ್ದ ಒಬ್ಬ ಪಂಡಿತನ ಮನೆಗೆ ಹೋಗಿ ತಾಯಿಯ ದೇಹಸ್ಥಿತಿಯನ್ನು ಹೇಳಿ ಔಷಧವನ್ನು ತೆಗೆದುಕೊಂಡು ಹಿಂದಿರುಗಿದಳು ಇವಳು ಬರುವಾಗ ಹಿಮವು ಹೆಚ್ಚಾಗಿದ್ದುದರಿಂದ ತನ್ನ ಮನೆಯ ದಾರಿಯು ತಪ್ಪಿಹೋಯಿತು ಎಷ್ಟು ಹುಡುಕಿದರೂ ದಾರಿಯು ಸಿಕ್ಕಲಿಲ್ಲ ಮುಂದೆ ಹೋಗಹೋಗುತ್ತ ಒಂದು ಗುಡ್ಡವು ಸಿಕ್ಕಲು ಅದನ್ನು ಹತ್ತಿ ಇಳಿಯುವಾಗ ಕಾಲುಜಾರಿ ಒಂದು ದೊಡ್ಡ ಹಳ್ಳದಲ್ಲಿ ಬಿದ್ದುಬಿಟ್ಟಳು, ನಾಯಿಯೂ ಅವಳೊಡನೆ ದುಮುಕಿತು ಮೇಲಕ್ಕೆ ಹತ್ತಲು ಎಷ್ಟೋ ಪ್ರಯತ್ನಪಟ್ಟಳು. ಸಾಧ್ಯವಾಗಲಿಲ್ಲ ಆಗ ಆ ಮಗುವಿಗೆ ಇನ್ನೂ ಎಂಟು ಹತ್ತು ವರುಷ, ಆದರೂ ತನ್ನ ಕಷ್ಟವನ್ನು ಲಕ್ಷ್ಯಮಾಡದೆ ತಾಯಿಯು ಸಂಕಟಪಡುತಿರುವಳೆಂದು ತಾನು ತಂದಿದ್ದ ಔಷಧವನ್ನು ನಾಯಿಯ ಕುತ್ತಿಗೆಗೆ ಕಟ್ಟಿ ನಾಯಿಯನ್ನು ಮನೆಗೆ ಹೋಗೆಂದು ಅಟ್ಟಿದಳು ನಾಯಿಯ ಬುದ್ಧಿ ಬಹು ಚುರುಕೆಂಬುದು ಗೊತ್ತಿದೆಯಷ್ಟೆ ! ನಾಯಿಯು ಯಜಮಾನನನ್ನು ಕರೆತರಬೇಕೆಂದು ಹೇಗೆ ಹೇಗೋ ನುಗ್ಗಿ ಬೇಗ ಮನೆಯನ್ನು ಸೇರಿತು

ಅತ್ತಲಾಗಿ ಆ ತಂದೆಯ ದುಃಖವೆಷ್ಟೆಂದು ಹೇಳೋಣ ! ಮಗಳು ಹೊರಟು ಹೋಗಿ ಬಹಳ ಹೊತ್ತಾಯಿತು, ಇನ್ನೂ ಬರಲಿಲ್ಲ ಹಿಮವು ಹೆಚ್ಚಾಗಿ ಸುರಿಯುತಿರುವುದು ಎಲ್ಲಿಯೋ ದಾರಿ ತಪ್ಪಿ ಹೋಗಿರಬಹುದೆಂದು ಕಾತರ ಪಡುತ್ತಿದ್ದನು. ಅಷ್ಟರಲ್ಲಿ ನಾಯಿಯೊಂದೇ ಬರಲು ಮಗಳು ದಾರಿ ತಪ್ಪಿ ಎಲ್ಲಿಯೋ ಹಳ್ಳದಲ್ಲಿ ಬಿದ್ದಿರಬೇಕೆಂಬುದು ಸ್ಪಷ್ಟವಾಯಿತು ನಾಯಿಯ ಕೊರಳಿಗೆ ಕಟ್ಟಿದ್ದ ಬಟ್ಟೆಯನ್ನು

ನೋಡಿ ಅದನ್ನು ಬಿಚ್ಚಿ ಅದರಲ್ಲಿದ್ದ ಔಷಧವನ್ನು ಹೆಂಡತಿಗೆ ಕೊಟ್ಟು ಮಗಳಿಗೆ ತಾಯಿಯಲ್ಲಿರುವ ಪ್ರೀತಿಗೂ, ಬುದ್ಧಿವಂತಿಕೆಗೂ, ಧೈರ್ಯಕ್ಕೂ, ಮೆಚ್ಚುತ್ತ ಮಗುವಿಗೆ ಆಗ ಸಂಭವಿಸಿರುವ ವಿಪತ್ತಿಗೆ ಅತ್ಯಂತವಾಗಿ ದುಃಖಿಸಿದನು.

ಆ ದುಃಖದಿಂದ ಬೇಗ ಚೇತರಿಸಿಕೊಂಡು ಎದ್ದು ಕೂಡಲೆ ಪಂಜನ್ನು ಕಟ್ಟಿಕೊಂಡು ನಾಯಿಯೊಡನೆ ಲೂಸಿಯನ್ನು ಹುಡುಕುವುದಕ್ಕೆ ಹೊರಟನು. ಹಿಮವು ಮೊದಲಿಗಿಂತಲೂ ಹೆಚ್ಚಾಗಿ ಸರಿಯುತಿದ್ದಿತು ಆ ಸುತ್ತುಮುತ್ತು ಪ್ರದೇಶವನ್ನೆಲ್ಲ ಹುಡುಕಿದುದಾಯಿತು. ಬಾರಿ ಬಾರಿಗೂ ಕೂಗಿದುದಾಯಿತು. ಬೆಟ್ಟ ಗುಡ್ಡಗಳಿಂದ ಪ್ರತಿಧ್ವನಿಯು ಹೊರಡುತಿದ್ದಿತೆ ಹೊರತು ಲೂಸಿಯಿಂದ ಯಾವ ಉತ್ತರವೂ ಹೊರಡಲಿಲ್ಲ ಲೂಸಿಯನ್ನು ಇವರು ಮತ್ತೆ ಕಾಣಲೇ ಇಲ್ಲ ಲೂಸಿಯು ಎಲ್ಲಿಯೋ ಮಾಯವಾದಳು

---

## ೩೯ ಸುಲ್ತಾನರ ಎಡಗಣ್ಣು (೧)

ತುರುಕರ ದೇಶ, ಆ ದೇಶದಲ್ಲಿ ಒಬ್ಬ ಸಾಹುಕಾರನು ಇದ್ದನು ಆ ಸಾಹುಕಾರನಿಗೆ ಮೂರು ಮಂದಿ ಹೆಣ್ಣು ಮಕ್ಕಳು ಅವರಲ್ಲಿ ಒಬ್ಬಳು ಬಹು ಬುದ್ಧಿವಂತಳು ರೂಪಿನಲ್ಲಿಯೂ ಚಲುವಾಗಿದ್ದಳು ಸಾಹುಕಾರನಿಗೆ ಆ ಮಗಳಲ್ಲಿ ಬಹಳ ಪ್ರೀತಿ ಹೀಗಿರುವಾಗ ಒಂದು ದಿನ ಆ ಸಾಹುಕಾರನು ವ್ಯಾಪಾರಕ್ಕಾಗಿ ಆ ದೇಶದ ಮುಖ್ಯಪಟ್ಟಣಕ್ಕೆ ಹೊರಟಿದ್ದನು ಆಗ ಅವನ ಮೂರು ಮಂದಿ ಹೆಣ್ಣು ಮಕ್ಕಳೂ ಬಂದರು ತಂದೆಯು ಅವರನ್ನು ನೋಡಿ, 'ನಾನು ಪಟ್ಟಣಕ್ಕೆ ಹೋಗಿ ಬರುತ್ತೇನೆ ನಿಮಗೆ ಏನು ಏನು ಬೇಕು ಹೇಳಿ, ತಂದು ಕೊಡುತ್ತೇನೆ' ಎಂದನು.

ಹಿರಿಯ ಮಗಳು ತನಗೆ ಒಂದು ಚಂದ್ರಹಾರವು ಬೇಕೆಂದಳು ನಡುಕಲವಳು ತನಗೆ ಬಾಜೋಬಂದ್ ಬೇಕೆಂದಳು ಕಿರಿಯವಳು ಏನೂ ಕೇಳದೆ ಸುಮ್ಮನಿದ್ದಳು ತಂದೆಯು ಇವಳು ಏನನ್ನೂ ಕೇಳದೆ ಸುಮ್ಮನಿದ್ದುದನ್ನು ಕಂಡು 'ಇದೇಕಮ್ಮ–ನಿನಗೆ ಏನೂ ಬೇಡವೆ? ಏನು ಬೇಕು? ಹೇಳು, ಏನು ಬೇಕಾದರೂ ತಂದು ಕೊಡುತ್ತೇನೆ' ಎಂದನು 'ನನಗೆ ಬೇಕಾದುದನ್ನು ತರುವುದು ಬಹು ಶ್ರಮ, ಆದುದರಿಂದ ನಾನು ಕೇಳಲಿಲ್ಲ' ಎಂದು ಮಗಳು ಹೇಳಲು ಅದಕ್ಕೆ ತಂದೆಯು 'ಎಷ್ಟು ಶ್ರಮವಾದರೂ ಪಟ್ಟು ಎಷ್ಟು ಬೆಲೆಯಾದರೂ ಕೊಟ್ಟು ನಾನು ತರುವೆನು, ಅದೇನು ಬೇಕು ಹೇಳು' ಎಂದನು ಹಾಗಾದರೆ ನನಗೆ ಬೇಕಾದುದು ಈ ದೇಶವನ್ನು ಆಳುವ ಸುಲ್ತಾನರ ಎಡಗಣ್ಣು ಸುಲ್ತಾನರ ಎಡಗಣ್ಣನ್ನು ಕೊಟ್ಟರೆ ನಿನ್ನಲ್ಲಿರುವ ಆ ರತ್ನದ ಉಂಗುರವನ್ನು ಕೊಡುವೆನೆಂದು ಹೇಳು, ಎಂದಳು. ಆ ಮಾತನ್ನು ಕೇಳಿ ತಂದೆಗೆ ಬಹಳ ಹೆದರಿಕೆಯುಂಟಾಯಿತು ಆದರೂ ಮಗಳು ಬಹಳ ಬುದ್ಧಿವಂತಳೆಂದು ತಿಳಿದಿದ್ದನಾದುದರಿಂದ ಅವಳ ಮಾತಿನಲ್ಲಿ ಗೌರವವಿಟ್ಟು

ಅವನು ಆಗಲೆಂದು ಒಪ್ಪಿ ಪಟ್ಟಣಕ್ಕೆ ಹೋದನು. ಅಲ್ಲಿ ಆ ಉಂಗುರವನ್ನು ಮುಖಂಡರಾದ ವರ್ತಕರಿಗೆ ತೋರಿಸಿ ಅದರ ಬೆಲೆಯು ಸುಲ್ತಾನರ ಎಡಗಣ್ಣು, ಸುಲ್ತಾನರ ಎಡಗಣ್ಣು ಕೊಟ್ಟರೆ ನಾನು ಉಂಗುರವನ್ನು ಕೊಡುವೆನೆಂದು ಹೇಳು ತ್ತಿದ್ದನು. ಇದನ್ನು ಸುಲ್ತಾನರ ಅಧಿಕಾರಿಗಳು ಕೇಳಿದೊಡನೆ ವರ್ತಕನಿಗೆ ಹಿಂಗಿಟ್ಟು ಮುರಿ ಕಟ್ಟಿ ಕರೆದುಕೊಂಡುಹೋಗಿ ಅವನನ್ನು ಸುಲ್ತಾನರ ಮುಂದೆ ಕೆಡಹಿ ಅವನು ಉಂಗುರಕ್ಕೆ ಕೇಳುತ್ತಿದ್ದ ಬೆಲೆಯನ್ನು ನಯ ಭಯದಿಂದ ತಿಳಿಸಿದರು.

ಸುಲ್ತಾನರು ಅವನ ಕಟ್ಟನ್ನು ಬಿಚ್ಚಿಸಿ ಏನು ಸಮಾಚಾರವೆಂದು ಅವನನ್ನು ಕೇಳಿದರು. ಅವನು ನೆಲದವರೆಗೂ ಬಾಗಿ ಸುಲ್ತಾನರಿಗೆ ಮೂರು ಮೂರಾವೃತ್ತಿ ಸಲಾಂ ಹಾಕಿ ಹುಜೂರ್, ದರ್ಬಾರ್, ಮಾಫ್‌ಕರ್‍ನಾ, ನಾನು ಏನೂ ತಿಳಿಯ ದವನು ನಾನು ನಿಜವಾಗಿ ಹೇಳುತ್ತೇನೆ, ನನ್ನ ಮಗಳು ಆ ಪದಾರ್ಥಕ್ಕೆ ಈ ಬೆಲೆ ಕೇಳೆಂದು ಹೇಳಿದ್ದಳು, ನಾನು ಕೇಳಿದೆನು, ಕ್ಷಮಿಸಬೇಕು' ಎಂದು ಮತ್ತೆ ಮತ್ತೆ ಸಲಾಂ ಮಾಡಿದನು

ಆಗ ಸುಲ್ತಾನರು ಒಂದುಗಳಿಗೆ ಚಿಂತಿಸಿ, ಒಳ್ಳೆಯದು, ನಮ್ಮ ಎಡಗಣ್ಣನ್ನು ಅಪೇಕ್ಷಿಸಿದ ನಿನ್ನ ಮಗಳನ್ನು ಕರೆದುಕೊಂಡು, ಬಾ, ನಾವು ವಿಚಾರಿಸುತ್ತೇವೆ' ಎಂದು ಹೇಳಿದರು ಮರುದಿನ ಕರೆದುಕೊಂಡು ಬರುವೆನೆಂದು ಸುಲ್ತಾನರ ಅಪ್ಪಣೆ ಯನ್ನು ಪಡೆದು ಅವನು ಹೊರಟನು

---

## ೭೦. ಸುಲ್ತಾನರ ಎಡಗಣ್ಣು (೨)

ಮೂರನೆಯ ದಿನ ಮಗಳೊಡನೆ ಆ ಸಾಹುಕಾರನು ಸುಲ್ತಾನರ ಮಹಲ್ ಮುಂದೆ ಬಂದು ನಿಂತನು ಸುಲ್ತಾನರು ಎಂದಿನಂತೆ ದರಬಾರಿಗೆ ಬಂದು ಇವ ರನ್ನು ಕರೆಯಿಸಿದರು. ಇಬ್ಬರೂ ಬಂದು ಸಲಾಂ ಮಾಡಿ ನಿಂತರು ಆಗ ಸುಲ್ತಾ ನರು ಮುಸುಕು ಹಾಕಿಕೊಂಡು ನಿಂತಿದ್ದ ಹುಡುಗಿಯ ಕಡೆ ತಿರುಗಿ, 'ನೀನು ನನ್ನ ಎಡಗಣ್ಣನ್ನು ಏಕೆ ಬಯಸಿದೆ?' ಎಂದು ಸಾಹುಕಾರನ ಮಗಳನ್ನು ಕೇಳಿದರು ಅವಳು ಮೊಳಕಾಲನ್ನೂರಿಕೊಂಡು ಸಲಾಂ ಮಾಡಿ, 'ಹುಜೂರ್, ಮಾಫ್‌ಕರ್‍ನಾ' ನಾನು ತಮ್ಮನ್ನು ನೋಡಿ ಒಂದು ವಿಷಯವನ್ನು ತಿಳಿಸಬೇಕೆಂದು ಈ ಉಪಾಯ ವನ್ನು ಹುಡುಕಿದೆನು.' ಎಂದಳು

ಸುಲ್ತಾನರು ಅವಳ ಉತ್ತರಕ್ಕೆ ಸಂತೋಷಪಟ್ಟು—'ಅದೇನು ವಿಷಯ' ಹೇಳೆಂದನು. ಅದಕ್ಕೆ ಅವಳು 'ನನ್ನ ಅಹವಾಲನ್ನು ಸಾವಧಾನದಿಂದ ಲಾಲಿಸ ಬೇಕು. ಒಬ್ಬ ದರಿದ್ರನು ಸ್ವಲ್ಪ ಹಣಗಾರನೊಡನೆ ಜಗಳವಾಡಿಕೊಂಡು ತಮ್ಮಲ್ಲಿ ದೂರು ಹೇಳಿಕೊಳ್ಳಲು ಬಂದರೆ ತಾವು ಬಡವನನ್ನು ನೋಡದೆ ಯಾವಾಗಲೂ ಹಣ ಗಾರನ ಪಕ್ಷವನ್ನೇ ವಹಿಸುವಿರಿ. ಅಲ್ಲದೆ ಹಣಗಾರನನ್ನು ಯಾವಾಗಲೂ ತಮ್ಮ

ಬಲಭಾಗದಲ್ಲಿಯೇ ಇಟ್ಟುಕೊಳ್ಳುವಿರಿ. ತಮಗೆ ದೇವರು ಕೊಟ್ಟಿರುವ ಎರಡು ಕಣ್ಣುಗಳಿಂದ ಎರಡು ಪಕ್ಷದವರನ್ನೂ ತಾವು ಸಮನಾಗಿ ನೋಡದೆ ಇರುವುದರಿಂದ ತಮಗೆ ಎಡಗಣ್ಣು ಉಪಯೋಗವಿಲ್ಲವೆಂದಾಲೋಚಿಸಿ ನಾನು ಅದನ್ನು ಅಪೇಕ್ಷಿಸಿದೆನು ' ಎಂದಳು

ಇದನ್ನು ಕೇಳಿ ಸುಲ್ತಾನರಿಗೆ ಬಹಳ ಕೋಪ ಬಂದಿತು ಸುಲ್ತಾನರಲ್ಲಿಗೆ ಬಂದು ಸುಲ್ತಾನರು ಮಾಡುತಿರುವುದು ಅನ್ಯಾಯವೆಂದು ಹೇಳುವರಾರು ? ಹೇಳಿ ಬದುಕುವರಾರು ? ಸುಲ್ತಾನನು ಇವಳನ್ನು ಅಲ್ಲೇ ಕತ್ತರಿಸಿ ಹಾಕುವನೆಂಬುದಾಗಿ ಭಾವಿಸಿ ಅಲ್ಲಿದ್ದವರೆಲ್ಲರೂ ಕಳವಳಿಸುತ್ತಿದ್ದರು ಸುಲ್ತಾನನಾದರೋ ಕೋಪವನ್ನು ಹಾಗೆಯೇ ಸಮಾಧಾನ ಮಾಡಿಕೊಂಡು ಇವಳ ಧೈರ್ಯವನ್ನೂ ಬುದ್ಧಿಯನ್ನೂ ಪರೀಕ್ಷಿಸಬೇಕೆಂದು ಕೆಲವು ಪ್ರಶ್ನೆಗಳನ್ನು ಕೇಳಿದನು. ಅವುಗಳಿಗೆಲ್ಲ ಸರಿಯಾದ ಉತ್ತರವನ್ನು ಕೊಟ್ಟು ದೇಶದಲ್ಲಿ ಅನ್ಯಾಯವು ಅನೇಕವಾಗಿ ನಡೆಯುವುದೆಂದು ಹೇಳಿದಳು ಆಗ ಸುಲ್ತಾನನಿಗೆ ಕೋಪವು ಇನ್ನೂ ಹೆಚ್ಚಿ, ಎಲ್ಲವನ್ನೂ ತಿಳಿದಿರುವಂತೆ ಮಾತನಾಡುತ್ತೀಯೆ. ಹಾಗಾದರೆ ನಮ್ಮಲ್ಲಿರುವ ಐಶ್ವರ್ಯದ ಬೆಲೆಯೆಷ್ಟು ? ನೀನು ಸರಿಯಾಗಿ ಹೇಳದಿದ್ದರೆ ನಿನ್ನನ್ನು ಸುಣ್ಣದ ಗೂಡಿನಲ್ಲಿ ಬಿರಿ ಹಾಕಿಸುವೆವು, ಎಂದನು

ಆಗ ಅವಳು ಧೈರ್ಯವನ್ನು ತಾಳಿ ಸುಲ್ತಾನರಿಗೆ ಮತ್ತೆ ಅಡ್ಡಬಿದ್ದು ಕೈಮುಗಿದು ' ಹುಜೂರ್, ಅಲ್ಪಳಾದ ನಾನು ಹೇಳುವಂತೆ ತಾವು ಮೂರು ದಿನಗಳು ಕೇಳುವುದಾದರೆ ನಾನು ತಮ್ಮ ಐಶ್ವರ್ಯದ ಬೆಲೆಯು ಇಷ್ಟೇ ಎಂದು ಹೇಳಬಲ್ಲೆನು ' ಎಂದಳು ಅದಕ್ಕೆ ಸುಲ್ತಾನರು ಒಪ್ಪಲು ಹಾಗಾದರೆ, ಮೂರುದಿನಗಳವುಟ್ಟಿಗೆ ತಾವು ಏನನ್ನೂ ತಿನ್ನದೆ ನೀರನ್ನೂ ಕುಡಿಯದೆ ಇರಬೇಕು ಎಂದಳು ಸುಲ್ತಾನರು ಅದೇರೀತಿ ಮಾಡಿದರು ಒಂದು ದಿನ ಉಪವಾಸವಿರುವುದೇ ಸುಲ್ತಾನರಿಗೆ ಬಹು ಕಷ್ಟವಾಯಿತು ಎರಡನೆಯ ದಿನ ಸುಲ್ತಾನರು ಕೈಯಲ್ಲಾಗದೆ ಬಿದ್ದುಬಿಟ್ಟರು. ತುಟಿ ಬಾಯಿ ಒಣಗುತ್ತ ಬಂದಿತು ಆಗ ಸಾಹುಕಾರನ ಮಗಳು, ಒಂದು ತಟ್ಟೆಯಲ್ಲಿ ರೊಟ್ಟಿಯನ್ನೂ ಒಂದು ಬಟ್ಟಲಲ್ಲಿ ನೀರನ್ನೂ ಇಟ್ಟು-ಹುಜೂರ್ ಪರಾಂಬರಿಸಬೇಕು. ನಿಮ್ಮ ಐಶ್ವರ್ಯದ ಬೆಲೆಯೆಲ್ಲ ಈಗ ಇವಕ್ಕೆ ಸಮನಾಗಿಲ್ಲವೆ ? ಹೇಳಬೇಕು, ಎಂದಳು

ಹಸಿದಿದ್ದ ಸುಲ್ತಾನರಿಗೆ ಮಾತನಾಡುವುದಕ್ಕೆ ಕೂಡ ಆಗದೆ ಅವಳ ಪ್ರಶ್ನೆಗೆ ಉತ್ತರವಾಗಿ ತಲೆಯನ್ನು ಜೋಲು ಹಾಕಿದರು. ಒಡನೆಯೆ ಸುಲ್ತಾನರಿಗೆ ಬೇಕಾದುದನ್ನು ಭೋಜನ ಮಾಡಬಹುದೆಂದು ಹೇಳಲು ಸುಲ್ತಾನರು ಸ್ವಲ್ಪ ತಿಂಡಿಯನ್ನು ತಿಂದು ನೀರನ್ನು ಕುಡಿದು ಚೇತರಿಸಿಕೊಂಡು ಅವಳ ಬುದ್ಧಿಗೂ ಧೈರ್ಯಕ್ಕೂ ಮೆಚ್ಚಿ ಅವಳನ್ನು ತನ್ನ ಮಗನಿಗೆ ಮದುವೆಮಾಡಿ, ' ನನ್ನ ಎಡಗಣ್ಣನ್ನು ಉಪಯೋಗಿಸುತಿರುವಂತೆ ಆಗಾಗ ನನಗೆ ಜ್ಞಾಪಕ ಕೊಡುತ್ತಿರು ' ಎಂದು ಹೇಳಿದನು. ಅವಳು ಸುಲ್ತಾನರಿಗೂ ಅವರ ಮಗನಿಗೂ ವಿವೇಕವನ್ನು ಹೇಳುತ್ತ, ರಾಜ್ಯವನ್ನು ಚೆನ್ನಾಗಿ ಆಳುವಂತೆ ಬೋಧಿಸುತ್ತ, ಬಹುಕಾಲ ಸುಖವಾಗಿದ್ದಳು.

## ೭೧. ರ್‍ಯಾಲಿ ಮತ್ತು ಎಲಿಜಬೆತ್

ರಾಣಿ ಎಲಿಜಬೆತ್ ಎಂಬವಳು ಇಂಗ್ಲೆಂಡ್ ದೇಶವನ್ನು ಆಳುತಿದ್ದಳು. ಈಕೆಯ ಕಾಲದಲ್ಲಿ ಆ ದೇಶವು ಬಹು ಪ್ರಸಿದ್ಧಿಗೆ ಬಂದಿತು ಒಂದಾನೊಂದು ದಿವಸ ರಾಣಿಯು ಕೆಲವರೊಡನೆ ಮಾತನಾಡುತ್ತ ಒಂದು ತೋಟದಲ್ಲಿ ತಿರುಗಾಡು ತ್ತಿದ್ದಹಾಗೆ ಬಹಳ ಕೆಸರಾಗಿರುವ ಸ್ಥಳಕ್ಕೆ ಬಂದಳು ಅದನ್ನು ದಾಟಿಕೊಂಡು ಮುಂದೆ ಹೋಗಬೇಕೆಂಬುದು ರಾಣಿಯ ಮನಸ್ಸು ಆದರೆ ರಾಣಿಗೆ ಕೆಸರನ್ನು ತುಳಿದುಕೊಂಡು ಹೋಗುವುದಕ್ಕೆ ಇಷ್ಟವಿರಲಿಲ್ಲ.

ಇಷ್ಟರಲ್ಲಿ ರಾಣಿಯ ಜತೆಯಲ್ಲೇ ಇದ್ದ ರ್‍ಯಾಲಿ ಎಂಬವನೊಬ್ಬನು ರಾಣಿಯ ಮನಸ್ಸನ್ನು ತಿಳಿದು ತಾನು ಮೈಮೇಲೆ ಹಾಕಿಕೊಂಡಿದ್ದ ಬೆಲೆಯುಳ್ಳ ಒಳ್ಳೆಯ ದಾದ ಅಂಗಿಯನ್ನು ಆ ಕೆಸರಿನ ಮೇಲೆ ಹಾಸಿ ಮುಂದೆ ದಯಮಾಡಬೇಕೆಂದು ರಾಣಿಯನ್ನು ಬೇಡಿಕೊಂಡನು ರಾಣಿ ಸಂತೋಷಪಟ್ಟು ಸಾಧ್ಯವಾದಷ್ಟು ಮೆತ್ತಗ ಆ ಅಂಗಿಯ ಮೇಲೆ ತನ್ನ ಕಾಲನ್ನೂರಿ ಕೆಸರನ್ನು ದಾಟಿದಳು ಅಲ್ಲಿಂಬ ಎಲ್ಲರೂ ಅರಮನೆಗೆ ಹೋದರು ಅಲ್ಲಿ ರಾಣಿಯು ಬಹಳ ಬೆಲೆಯುಳ್ಳ ಉಡುಪುಗಳನ್ನು ರ್‍ಯಾಲಿಗೆ ತಂಸಿಕೊಟ್ಟು ಮರ್‍ಯಾದೆ ಮಾಡಿದಳು ಅಂದಿನಿಂದ ರ್‍ಯಾಲಿಯು ರಾಣಿಯ ದಯೆಗೆ ಪಾತ್ರನಾದನು

---

## ೭೨. ರ್‍ಯಾಲಿ

ಇಂಗ್ಲೆಂಡ್ ದೇಶವನ್ನು ಆಳುತ್ತಿದ್ದ ರಾಣಿ ಎಲಿಜಬೆತ್‌ನ ಕಾಲದಲ್ಲಿ ರ್‍ಯಾಲಿಯು ಪ್ರಸಿದ್ಧಿಗೆ ಬಂದನು ಇವನು ನಾನಾ ದೇಶಗಳನ್ನು ಸುತ್ತಿ ಅನೇಕ ಹೊಸ ವಿಷಯಗಳನ್ನು ಜನರ ತಿಳಿವಳಿಕೆಗೆ ತಂದನು ಇಂಗ್ಲಿಷರಿಗೆ ಹೊಗೆಸೊಪ್ಪೆಂ ಬುದೇ ಗೊತ್ತಿರಲಿಲ್ಲ ರ್‍ಯಾಲಿಯು ಬೇರೆಯೊಂದು ದೇಶದಿಂದ ತನ್ನೊಡನೆ ತಂದಿದ್ದ ಹೊಗೆಸೊಪ್ಪನ್ನು ಸೇದುತ್ತ ಒಂದು ಕೊಟಡಿಯಲ್ಲಿ ಕುಳಿತಿದ್ದನು

ರ್‍ಯಾಲಿಯ ಸೇವಕನು ಒಂದು ವರ್ತಮಾನವನ್ನು ಹೇಳಬೇಕೆಂದು ಯಜಮಾ ನನು ಇದ್ದ ಕಡೆಗೆ ಬಂದನು ರ್‍ಯಾಲಿಯು ಹೊಗೆಬತ್ತಿ ಸೇದುತ್ತಿದ್ದುದರಿಂದ ಅಲ್ಲೇ ಹೊಗೆಯು ತುಂಬಿದ್ದಿತು. ಹೊಗೆಬತ್ತಿ ಸೇದುವುದನ್ನು ಎಂದೂ ನೋಡದಿದ್ದ ಆ ಸೇವಕನು ಕೊಟಡಿಯಲ್ಲೆಲ್ಲ ಹೊಗೆಯು ಸುತ್ತಿರುವುದನ್ನೂ ಅಲ್ಲಿ ತನ್ನ ಯಜಮಾನ ನಿರುವುದನ್ನೂ ನೋಡಿ ಒಡನೆಯೆ ಓಡಿಹೋಗಿ ಒಂದು ಬಿಂದಿಗೆ ನೀರು ತಂದು ರ್‍ಯಾಲಿಯ ಬಟ್ಟೆಗೆ ಬೆಂಕಿ ಬಿದ್ದು ಇರಬಹುದೆಂದು ತಿಳಿದು ಬೆಂಕಿಯನ್ನು ಆರಿಸುವು ದಕ್ಕೆಂದು ಯಜಮಾನನ ಮೇಲೆ ಆ ಬಿಂದಿಗೆಯ ನೀರನ್ನು ದಡದಡನೆ ಹೊಯಿದನು

ರ್‍ಯಾಲಿಯು ಕೋಪಿಸಿಕೊಳ್ಳದ ನಗುತ್ತ "ಈ ಬೆಂಕಿಯನ್ನು ನಾನೇ ಸುಲಭ ವಾಗಿ ಆರಿಸುತ್ತಿದ್ದೆನು," ಎಂದನು

## ೭೩. ಈ ಸಾಲವನ್ನು ತೀರಿಸುವರು ಯಾರು?

ಪ್ರಶ್ಯಾ ದೇಶವನ್ನು ಫ್ರೆಡ್ರಿಕನು ಆಳುತ್ತಿದ್ದ ಕಾಲದಲ್ಲಿ ಆ ದೇಶದ ಅಧಿಕಾರಿಯೊಬ್ಬನು ಬಹು ಸಾಲಗಾರನಾಗಿದ್ದನು ಆಗಾಗ ಉಂಟಾಗುತ್ತಿದ್ದ ಅಲ್ಪ ಸ್ವಲ್ಪ ತೊಂದರೆಗಳನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಅವನು ಸ್ವಲ್ಪ ಸ್ವಲ್ಪವೇ ಸಾಲಮಾಡುತಿದ್ದು ಕೊನೆಗೆ ಹೆಚ್ಚಾಗಿ ಸಾಲ ಮಾಡಿದನು ಸಾಲದ ಚಿಂತೆಯಿಂದ ದಿನೇ ದಿನೇ ಬೆಪ್ಪಾಗುತ್ತ ಬಂದನು

ಫ್ರೆಡ್ರಿಕನು ತನ್ನ ಸೇನೆಯೊಡನೆ ಇನ್ನೊಂದು ರಾಜ್ಯದ ಮೇಲೆ ಹೊರಟಾಗ ಈ ಅಧಿಕಾರಿಯೂ ಜತೆಯಲ್ಲಿಯೇ ಹೊರಟನು ಸೈನ್ಯವೆಲ್ಲ ಒಂದು ಸ್ಥಳದಲ್ಲಿ ಇಳಿದಿದ್ದಿತು ಈ ಅಧಿಕಾರಿಯೂ ತನ್ನ ಡೇರೆಯಲ್ಲಿದ್ದನು ರಾತ್ರಿ ಹನ್ನೆರಡು ಗಂಟೆ ಸಮಯವಾಗಿದ್ದಿತು ಸಾಲದ ಚಿಂತೆಯಿಂದ ಅಧಿಕಾರಿಗೆ ನಿದ್ರೆಯೇ ಬರಲಿಲ್ಲ ಆಗ ಅಧಿಕಾರಿಯು ಒಂದು ಕಾಗದವನ್ನು ತೆಗೆದುಕೊಂಡು ತನ್ನ ಸಾಲವನ್ನೆಲ್ಲ ಬರೆದನು. ಸಾಲವನ್ನು ತೀರಿಸುವುದು ಇವನಿಗೆ ಅಸಾಧ್ಯವೆಂದು ತೋರಿತು ಏನೂ ತೋರದೆ ' ಈ ಸಾಲವನ್ನೆಲ್ಲ ತೀರಿಸುವರು ಯಾರು ? ' ಎಂದು ಆ ಪಟ್ಟಿಯ ಕೆಳಗೆ ಗೀಚಿದನು ಹಾಗೆಯೇ ಸ್ವಲ್ಪ ನಿದ್ರೆ ಬಂದಿತು ಮೇಜಿನಮೇಲೆ ಈ ಕಾಗದವು ಬಿದ್ದಿದ್ದಿತ್ತು

ಅಷ್ಟು ಹೊತ್ತಿಗೆ ಸರಿಯಾಗಿ ಪಾಳಯವನ್ನು ನೋಡಿಕೊಂಡು ಬರಲು ಫ್ರೆಡ್ರಿಕನು ಹೊರಟು ಈ ಅಧಿಕಾರಿಯ ಡೇರೆಯ ಬಾಗಿಲು ತೆರೆದಿದ್ದುದನ್ನು ನೋಡಿ ಒಳಕ್ಕೆ ಬಂದನು ಮೇಜಿನಮೇಲೆ ಇದ್ದ ಪಟ್ಟಿಯು ಕಾಣಬಂದಿತು ಇವನು ಶಕ್ತನಾದ ಅಧಿಕಾರಿಯೆಂದು ಫ್ರೆಡ್ರಿಕನು ತಿಳಿದಿದ್ದುದರಿಂದ ಅವನಿಗೆ ಸಂತೋಷ ಪಡಿಸಬೇಕೆಂದು ಆ ಪಟ್ಟಿಯ ಕೆಳಗೆ-ನಾನು ಫ್ರೆಡ್ರಿಕ್, ಎಂದು ಬರೆದಿಟ್ಟು ಹೊರಟು ಹೋದನು ಸ್ವಲ್ಪ ಹೊತ್ತಾದ ಮೇಲೆ ಅಧಿಕಾರಿಯು ಎಚ್ಚತ್ತು ತಿರುಗಿ ಆ ಪಟ್ಟಿಯನ್ನು ತೆಗೆದುಕೊಂಡು ನೋಡುತ್ತ ಕುಳಿತನು ಆ ಮೇಲೆ ಒಂದೊಂದನ್ನಾಗಿ ಓದುತ್ತ ಬಂದನು ಪಟ್ಟಿಯ ಕೊನೆಯವರೆಗೂ ಓದಿ ' ಈ ಸಾಲವನ್ನು ತೀರಿಸುವರು ಯಾರು ? ಎಂದು ತಾನೇ ಬರೆದು ಇದುದ್ದನ್ನೂ ಓದಿದನು ಅದರ ಕೆಳಗೆ ' ನಾನು ಫ್ರೆಡ್ರಿಕ್ ' ಎಂದು ದೊರೆಯು ಬರೆದು ಇದ್ದುದನ್ನೂ ನೋಡಿ ದಿಗಿಲುಬಿದ್ದನು. ಮತ್ತ ನೋಡಿದನು ಮತ್ತೆ ಮತ್ತೆ ನಾನು ಫ್ರೆಡ್ರಿಕ್ ಎಂಬುದನ್ನು ಓದಿದನು.

ಬೆಳಗಾಯಿತು ಫ್ರೆಡ್ರಿಕನು ಹಣವನ್ನು ಕಳುಹಿಸಿದನು ಅಧಿಕಾರಿಯು ಸಂತೋಷದಿಂದಲೂ ಸಂಕೋಚದಿಂದಲೂ ಅದನ್ನು ತೆಗೆದುಕೊಂಡು ಸಾಲವನ್ನೆಲ್ಲ ತೀರಿಸಿದನು ಅಂದಿನಿಂದ ಮುಂದೆ ಸಾಲವನ್ನು ಮಾಡದೆ ದೊರೆಯು ಮಾಡಿದ ಸಹಾಯಕ್ಕೆ ಪ್ರತಿಯಾಗಿ ತನ್ನ ಜೀವದ ಮೇಲಣ ಆಶೆಯನ್ನೇ ಬಿಟ್ಟು ಯುದ್ಧದಲ್ಲಿ ಹೋರಾಡಿ ದೊರೆಯ ಮನಸ್ಸನ್ನು ಸಂತೋಷಪಡಿಸಿದನು.

## ೭೪. ಹೂಳಿಟ್ಟ ಹಣ

ಒಂದು ಹಳ್ಳಿಯಲ್ಲಿ ಒಬ್ಬ ಒಕ್ಕಲಿಗನು ವಾಸವಾಗಿದ್ದನು ಅವನಿಗೆ ನಾಲ್ಕು ಮಂದಿ ಗಂಡುಮಕ್ಕಳಿದ್ದರು ಅವರು ಯಾವ ಕೆಲಸವನ್ನೂ ಮಾಡದೆ ಮುದುಕನಾದ ತಂದೆಯು ಕಷ್ಟಪಟ್ಟು ತೋಟದಲ್ಲಿ ಬೆಳೆದುದನ್ನು ತಿಂದು ಕಾಲವನ್ನು ಕಳೆಯುತ್ತಿದ್ದರು. ತಂದೆಯು ಎಷ್ಟು ವಿಧವಾಗಿ ಹೇಳಿದರೂ ಮಕ್ಕಳು ತೋಟದ ಕೆಲಸವನ್ನು ಮಾಡುತ್ತಿರಲಿಲ್ಲ ಕೆಲವು ಕಾಲದ ಮೇಲೆ ತಂದೆಗೆ ಆಲಸ್ಯವಾಯಿತು ಹಾಗೆಯೇ ರೋಗವು ಹಚ್ಚಿತು ಪ್ರಾಣಹೋಗುವ ಕಾಲವು ಬಂದಿತು

ಆಗ ತಂದೆಯು ಮಕ್ಕಳನ್ನೆಲ್ಲ ಕರೆದು, 'ನಾನು ಒಂದು ಗುಟ್ಟು-ಗುಟ್ಟು-ಹೇಳು-ಹೇಳುತ್ತೇನೆ ನಿಮ್ಮಲ್ಲಿ ಇ-ರ ಲಿ ನಮ್ಮ ತೋ—ತೋಟದಲ್ಲಿ—ಹಣವು ಹೂ—ಹೂಳಿಟ್ಟಿದೆ—' ಎಂದು ಹೇಳುತಿರುವ ಹಾಗೆ ಸೋಮಾರಿಗಳಾದ ಈ ಮಕ್ಕಳೆಲ್ಲ 'ಎಲ್ಲಿ ? ಎಲ್ಲಿ ? ಎಲ್ಲಿ ಹೂಳಿಟ್ಟಿರುವುದು ?' ಎಂದು ಒಟ್ಟಿಗೆ ಕೇಳಿದರು ತಂದೆಯು ಸ್ವಲ್ಪ ಸುದಾರಿಸಿಕೊಂಡು 'ಹೇಳುತ್ತೇನೆ—ತಾಳಿ—ಆ ಹಣ ಸಿಕ್ಕು—ಸಿಕ್ಕು ಬೇಕಾದರೆ—ನೀವು ಚನ್ನಾಗಿ ಅಗೆಯಬೇಕು' ಎಂದು ಹೇಳುತ್ತಿದ್ದಹಾಗೆಯೆ ಪ್ರಾಣವನ್ನು ಬಿಟ್ಟನು

ತೋಟದಲ್ಲಿ ಹೂಳಿಟ್ಟಿರುವ ಹಣವನ್ನು ತೆಗೆದುಕೊಳ್ಳಬೇಕೆಂದು ನಾಲ್ಕುಜನ ಅಣ್ಣತಮ್ಮಂದಿರೂ ಚೆನ್ನಾಗಿ ತೋಟವನ್ನೆಲ್ಲ ಅಗದರು ಎಲ್ಲ ಅಗೆದರೂ 'ಎಷ್ಟು ಆಳವಾಗಿ ಅಗೆದರೂ ಹಣವು ಸಿಕ್ಕಲಿಲ್ಲ ಯಾವ ಮರದ ಕೆಳಗೋ ಹೂಳಿಟ್ಟಿರಬಹುದೆಂದು ಅಗೆಯುತ್ತಲೇ ಇದ್ದರು ತೋಟಕ್ಕೆ ಅಗತೆಯು ಚೆನ್ನಾಗಿ ಆದುದರಿಂದ ಗಿಡಗಳೆಲ್ಲ ಚಿಗುತು ಹೂ ಕಾಯಿ ಬೇಕಾದಷ್ಟು ಬಿಟ್ಟವು ಅವನ್ನೆಲ್ಲ ಮಾರಲು ಬಹಳ ಹಣ ಸಿಕ್ಕಿತು. ಆಗ ಅಣ್ಣತಮ್ಮಂದಿರು ವಿವೇಕಿಯಾದ ನಮ್ಮ ತಂದೆಯು ಹೂಳಿಟ್ಟಿರುವ ಹಣದ ಬಿಡ್ಡಿಯು ಇದೇಯೇ ! ನಾವು ತೋಟವನ್ನು ಅಗತೆ ಮಾಡಿದ ಹಾಗೆಲ್ಲ ಹಣವು ಸಿಕ್ಕುತ್ತ ಬರುವುದು, ನಾವು ಸುಖವಾಗಿರುವೆವು, ಎಂದು ತಿಳಿದರು

---

## ೭೫. ನ್ಯೂಟನ್ನಿನ ಸೈರಣೆ

ಇಂಗ್ಲೆಂಡ್ ದೇಶದಲ್ಲಿ ನ್ಯೂಟನ್ ಎಂಬ ದೊಡ್ಡ ಪಂಡಿತನೊಬ್ಬನು ಇದ್ದನು ಇವನು ಚಿಕ್ಕಂದಿನಿಂದಲೂ ಅನೇಕ ವಿಷಯಗಳನ್ನು ಚರ್ಚಿಸಿ ಪರೀಕ್ಷಿಸಿ ಗೊತ್ತು ಮಾಡಿಕೊಳ್ಳುತ್ತಿದ್ದು, ದೊಡ್ಡವನಾದಮೇಲೆ ತಾನು ಚೆನ್ನಾಗಿ ತಿಳಿದುಕೊಂಡಿದ್ದ ವಿಷಯಗಳನ್ನೆಲ್ಲ ಸೇರಿಸಿ ಒಂದು ದೊಡ್ಡ ಪುಸ್ತಕವನ್ನು ಬರೆದನು. ತಾನು ಬರೆದ ಪುಸ್ತಕವನ್ನು ಮತ್ತೆ ಓದಿ ಅದರಲ್ಲಿ ಕಂಡುಬಂದ ತಪ್ಪುಗಳನ್ನು ತಿದ್ದುತ್ತ, ಒಂದು ದಿನ ರಾತ್ರಿ ಹನ್ನೊಂದು ಗಂಟೆಯ ವರೆಗೂ ಕುಳಿತಿದ್ದನು

ಇವನ ಮೇಜಿನ ಮೇಲೆ ದೀಪವು ಉರಿಯುತ್ತಿದ್ದಿತು ಇವನು ಬರೆದಿದ್ದ ಪುಸ್ತಕದ ಹಾಳಗಳೆಲ್ಲ ಮೇಜಿನ ಮೇಲೆ ಇದ್ದುವು ಇವನ ಕಾಲಿನ ಹತ್ತಿರ ಡೈಮಂಡ್ ಎಂಬ ಇವನ ನಾಯಿ ಬಂದು ಮಲಗಿದ್ದಿತು. ಆಗ ನ್ಯೂಟನ್ನನು ಏತಕೋ ಎದ್ದು ಹೊರಕ್ಕೆ ಬಂದನು ಇವನು ಎದ್ದಾಗ ಶಬ್ದವಾಗಲು ನಾಯಿಯು ಎಚ್ಚರಗೊಂಡಿತು ಹಾಗೆ ಎಚ್ಚತ್ತು ನಾಯಿಯು ಮೇಜಿನ ಮೇಲೆ ಹಾರಿತು ಹಾರಿದ ರಭಸಕ್ಕೆ ಮೇಜು ಅಲ್ಲಾಡಿ ದೀಪವು ಉರುಟಿತು ಆಗ ಅಲ್ಲಿ ಹರಡಿದ್ದ ಪುಸ್ತಕದ ಹಾಳೆಗಳೆಲ್ಲ ಹೊತ್ತಿಕೊಂಡು ಉರಿಯ ತೊಡಗಿದುವು.

ಹೊರಗೆ ಹೋಗಿದ್ದ ನ್ಯೂಟನ್ನನು ಬಂದನು ಕೊಟಡಿಯು ಬಹಳ ಬೆಳಕಾಗಿದ್ದಿತು ಮೇಜನ್ನು ನೋಡಿದನು ದೀಪವು ಉರುಟಿದ್ದಿತು ಕಾಗದಗಳು ಹೊತ್ತಿಕೊಂಡಿದ್ದುವು ಡೈಮಂಡ್—ಎಂದನು ಅದು ಬಾಲವನ್ನು ಅಲ್ಲಾಡಿಸುತ್ತ ನಿಂತಿತು ಅವನಿಗೆ ಆಗ ಬಹು ದುಃಖ ಬಂದಿತು ಅಷ್ಟು ದಿನಗಳಿಂದಲೂ ತಾನು ಮಾಡಿದ ಕೆಲಸವೆಲ್ಲ ಬೂದಿಯಾಯಿತು ನಾಯಿಯು ಹಾಳುಮಾಡಿತೆಂದು ತಿಳಿದನು ಆ ಪುಸ್ತಕವನ್ನು ಮತ್ತೆ ಬರೆಯಲು ಅವನಿಗೆ ಮುಪ್ಪಿನಕಾಲ ಏನು ಮಾಡುವುದು ! ಆಗ ನ್ಯೂಟನ್ನನು ಬಹು ದುಃಖದಿಂದ ಡೈಮಂಡ್, ಡೈಮಂಡ್, ನೀನು ಮಾಡಿದ ಹಾವಳಿ ನಿನಗೇನಾದರೂ ಗೊತ್ತಿದೆಯೇ ? ' ಎಂದು ಹೇಳುತ್ತ ಹಾಗೆಯೆ ಸೈರಿಸಿಕೊಂಡನು

---

## ೭೬ ಸಮುದ್ರ ಕಳ್ಳರು

ಇಂಗ್ಲೆಂಡ್ ದೇಶದ ಸಾಹುಕಾರನೊಬ್ಬನು ಹಾಲೆಂಡ್ ದೇಶದಿಂದ ಬೆಣ್ಣೆಯನ್ನೂ ಸ್ವೀಡನ್ ದೇಶದಿಂದ ಕಬ್ಬಿಣವನ್ನೂ ಫ್ರಾನ್ಸ್ ದೇಶದಿಂದ ರೇಷ್ಮೆಯನ್ನೂ ಒಂದು ಹಡಗಿನಲ್ಲಿ ತುಂಬಿಕೊಂಡು ತನ್ನ ದೇಶಕ್ಕೆ ಹೋಗುತ್ತಿದ್ದನು ಆ ಹಡಗು ಸಮುದ್ರದ ಮಧ್ಯದಲ್ಲಿ ಹೋಗುತ್ತಿದ್ದಾಗ ಕಳ್ಳರ ಸಣ್ಣಸಣ್ಣ ಹಡಗುಗಳು ದೂರದಲ್ಲಿ ಕಾಣಬಂದುವು ಆಗ ಸಾಹುಕಾರನು ಕಳ್ಳರು ಬಂದು ಸಾಮಾನುಗಳನ್ನೆಲ್ಲ ಸಾಗಿಸಿ ತನ್ನ ಹಡುಗನ್ನು ಮುಳುಗಿಸುವರೆಂದಾಲೋಚಿಸಿ ಒಂದು ಉಪಾಯವನ್ನು ಮಾಡಿದನು

ಹೇಗಾದರೂ ನಷ್ಟವಾಗುವುದೇ ನಿಶ್ಚಯವೆಂದು ತನ್ನ ಹಡಗಿನಲ್ಲಿದ್ದ ಬೆಣ್ಣೆಯ ಪೆಟ್ಟಿಗೆಗಳನ್ನು ಒಡೆಯಿಸಿ ಬೆಣ್ಣೆಯನ್ನು ಹಡಗಿನ ಮೇಲೆಲ್ಲ ಚೆನ್ನಾಗಿ ತಿಕ್ಕಿಸಿ ಹಗ್ಗಗಳಿಗೆಲ್ಲ ಬಳಿಸಿ ಸಿದ್ಧನಾಗಿದ್ದನು ಕಳ್ಳರು ಬಂದರು. ಆಗ ಕಳ್ಳರ ಯಜಮಾನನು ಕತ್ತಿಯನ್ನು ಹಿಡಿದು ' ನಿಮ್ಮ ಹಡಗಿನಲ್ಲಿರುವ ಸರಕುಗಳನ್ನೆಲ್ಲ ಕೊಟ್ಟುಬಿಡಿ ' ಎಂದು ಸಂಜ್ಞೆ ಮಾಡಿದನು ಅದಕ್ಕೆ ಸಾಹುಕಾರನು, ' ಸಿದ್ಧವಾಗಿದ್ದೇವೆ, ಇಲ್ಲೇ ಒಂದು ತೆಗೆದುಕೊಂಡು ಹೋಗಬಹುದು ' ಎಂದು ನಮಸ್ಕಾರಮಾಡಿದನು. ಕಳ್ಳರು ಸಂತೋಷದಿಂದ ಕತ್ತಿ ಕಠಾರಿಗಳನ್ನು ಹಿಡಿದುಕೊಂಡು ಸಾಹುಕಾರನ ಹಡಗನ್ನು ಹತ್ತುವುದಕ್ಕೆ ಬಂದರು.

ಒಬ್ಬಬ್ಬರಾಗಿ ಕಾಲುಜಾರಿ ದಪ್, ದಪ್ಪನೆ ಸಮುದ್ರಕ್ಕೆ ಬೀಳುತಿದ್ದರು. ಕಳ್ಳರಿಗೆಲ್ಲ ದಿಗಿಲಾಯಿತು ಸಾಹಸದಿಂದ ಮೇಲೆ ಬಂದರೆ ಅಲ್ಲಿಯೂ ಜಾರಿ ಬೀಳುತ್ತಿದ್ದರು ಆಗ ಇವರೇನೋ ತಂತ್ರ ಮಾಡಿರುವರೆಂದು ಹೆದರಿ ಉಳಿದವ ರೆಲ್ಲರೂ ಓಡಿ ಹೋದರು ಸಾಹುಕಾರನು ಉಪಾಯದಿಂದ ಪ್ರಾಣಗಳನ್ನೂ ಸರಕು ಗಳನ್ನೂ ಉಳಿಸಿಕೊಂಡು ಊರಿಗೆ ಬಂದು ಸೇರಿದನು

---

## ೭೭ ಸತ್ತವರು ಊಟಮಾಡುವರೆ?

ಹುಚ್ಚರಿಗೆ ಬುದ್ಧಿ ಸರಿಯಾಗಿರುವುದಿಲ್ಲ, ಆದುದರಿಂದ ಅವರು ಇತರರನ್ನು ಹಿಂಸೆಮಾಡದ ಹಾಗೆ ಅವರನ್ನೆಲ್ಲ ಒಂದು ಮನೆಯಲ್ಲಿ ಇಡುವರು ಇಂತಹ ಮನೆಗ ಹುಚ್ಚರ ಆಸ್ಪತ್ರೆಯೆಂದು ಹೆಸರು ಇಲ್ಲಿ ಹುಚ್ಚರಿಗೆ ತಕ್ಕಮಟ್ಟಿಗೆ ಉಪಚಾರ ಮಾಡುವರಲ್ಲದೆ ಅವರವರ ಮನಸ್ಸಿಗೆ ಒಪ್ಪಿದ ಕೆಲಸವನ್ನು ಉಪಾಯದಲ್ಲಿ ಮಾಡಿ ಸುವರು ಒಬ್ಬೊಬ್ಬರ ಹುಚ್ಚು ಒಂದೊಂದು ರೀತಿ

ಒಬ್ಬ ಹುಚ್ಚನ ಮನಸ್ಸಿಗೆ ತಾನು ಸತ್ತುಹೋದುದಾಗಿ ತೋರಿಹೋಯಿತು ಹುಚ್ಚ, ಪಾಪ! ಯಾರು ಬಂದರೂ ನಾನು ಸತ್ತುಹೋದೆನು ನನ್ನೊಡನೆ ಮಾತ ನಾಡಬೇಡಿ ನಾನು ಊಟಮಾಡುವುದಿಲ್ಲ ಸತ್ತವರು ಊಟಮಾಡುತ್ತಾರೆಯೆ? ಎಂದು ಹೇಳಿಕೊಳ್ಳುತ್ತ ಊಟವನ್ನೇ ಬಿಟ್ಟುಬಿಟ್ಟನು ಒಂದು ದಿನವಾಯಿತು, ಎರಡು ದಿನಗಳಾದುವು ಅನ್ನವಿಲ್ಲ, ನೀರಿಲ್ಲ, ಮಾತಿಲ್ಲ? ಕಥೆಯಿಲ್ಲ ನಿಜ ವಾಗಿಯೂ ಸಾಯುವ ಹಾಗೆ ಆದನು ಆಗ ಇವನನ್ನು ಹುಚ್ಚರ ಆಸ್ಪತ್ರೆಗ ಕರೆದುಕೊಂಡು ಹೋದರು

ಅಲ್ಲಿದ್ದ ವೈದ್ಯನು ಆ ಹುಚ್ಚನಿಗೆ ಎಷ್ಟೆಷ್ಟೋ ಉಪಾಯದಲ್ಲಿ ಹೇಳಿದನು ಹುಚ್ಚನು ಕೇಳಲಿಲ್ಲ, ವೈದ್ಯನು ಹೊಡೆಯುತ್ತೇನೆಂದು ಬೆದರಿಸಿದನು, ಅದಕ್ಕೂ ಊಹು. ವೈದ್ಯನಿಗೆ ಬಹು ವ್ಯಥೆಯಾಯಿತು ಕೊನೆಗೆ ವೈದ್ಯನು ಹೊರಕ್ಕೆ ಬಂದು ಆರು ಏಣಿಗಳನ್ನು ತರಿಸಿ ಆರು ಮಂದಿಯನ್ನು ಕರೆದು ಅವರಿಗೆ ಏಣಿಗಳ ಮೇಲೆ ಮಲಗಿಕೊಳ್ಳುವಂತೆ ಹೇಳಿ ಬಿಳಿಯ ಬಟ್ಟೆಗಳನ್ನು ಹೊದಿಸಿ, 'ನೀವುಗಳೆಲ್ಲರೂ ಸತ್ತವರಂತೆ ಸುಮ್ಮನೆ ಇರಿ ತಿಂಡಿಯನ್ನು ಕೊಟ್ಟರೆ ಆ ಹುಚ್ಚನಿದಿರಿಗೆ ಮಾತ ನಾಡದೆ ತಿನ್ನಿರಿ' ಎಂದು ಹೇಳಿಕೊಟ್ಟು ಅವರನ್ನೆಲ್ಲ ಏಣಿಯಮೇಲೆ ಹೊರಿಸಿಕೊಂಡು ಹೋಗಿ ಆ ಹುಚ್ಚನಿಗೆ ಕಾಣುವ ಹಾಗೆ ದೂರದಲ್ಲಿಟ್ಟು ಒಬ್ಬೊಬ್ಬನಿಗಾಗಿ ವೈದ್ಯನು ತಿಂಡಿಯನ್ನು ಕೊಡುತ್ತ ಬಂದನು ಅವರು ಸದ್ದಿಲ್ಲದೆ ತಿನ್ನುತ್ತ ಬಂದರು

ಅವರನ್ನೇ ನೋಡುತ್ತಿದ್ದ ಹುಚ್ಚನು ಸತ್ತವರು ಊಟ ಮಾಡುವರೆ! ಅಯ್ಯೋ! ನಾನು ಸತ್ತವನು. ನನಗೂ ಹಸಿವು ಆಗುವುದು. ನಾನೇಕೆ ಉಪವಾಸವಿರಲಿ ನನಗೂ ತಿಂಡಿ ಕೊಡಿ ನಾನು ತಿನ್ನುತ್ತೇನೆ ಎಂದು, ಮೆಲ್ಲನೆ ಕೂಗಿ ಹೇಳಿ ದನು. ಆಗ ವೈದ್ಯನು ಅವನಿಗೆ ತಿಂಡಿ ಕೊಟ್ಟು ಅವನ ಹುಚ್ಚನ್ನು ಬಿಡಿಸಿದನು.

---

## ೭೮ ಅವಿಧೇಯತೆ

ಪ್ರಶ್ಯಾ ದೇಶವೆಂಬುದು ಒಂದು ದೊಡ್ಡ ರಾಜ್ಯ ಆ ರಾಜ್ಯಕ್ಕೆ ಫ್ರೆಡ್ರಿಕ ನೆಂಬವನು ದೊರೆಯಾಗಿದ್ದನು ಅವನು ಒಂದು ದಿನ ತನ್ನ ಸೈನ್ಯದೊಡನೆ ಒಂದು ಪಾಳೆಯಲ್ಲಿದ್ದನು ಇವನ ಪಾಳೆಯಕ್ಕೆ ಸಮೀಪವಾಗಿ ಇವನ ಹಗೆಗಳ ಪಾಳಯ ಎದ್ದುದರಿಂದ ರಾತ್ರಿಯವೇಳೆ ಶತ್ರುಗಳು ತನ್ನ ಜನರ ಮೇಲೆ ಬಿದ್ದಾರೆಂದು, ಸಾಯಂಕಾಲ ಎಂಟು ಗಂಟೆಯ ಹೊತ್ತಿಗೆ ಸರಿಯಾಗಿ ತನ್ನ ಪಾಳೆಯದಲ್ಲಿ ದೀಪ ವನ್ನೆಲ್ಲ ಆರಿಸಿರಬೇಕೆಂದು ಸಾರಿಸಿದ್ದನು ಕಾಲಕ್ಕೆ ಸರಿಯಾಗಿ ಆರಿಸದೆ ಯಾರಾ ದರೂ ಯಾವ ಬಿಡಾರದಲ್ಲಿಯಾದರೂ ದೀಪವನ್ನು ಇಟ್ಟಿದ್ದರೆ ಅವರನ್ನು ಗುಂಡಿನ ಬಾಯಿಗೆ ಕಟ್ಟಿ ಸುಡುವೆನೆಂದು ಡಂಗುರವನ್ನು ಹೊಯಿಸಿದ್ದನು

ಒಂದು ದಿನ ರಾತ್ರಿ ಕಾಲಕ್ಕೆ ಸರಿಯಾಗಿ ದೀಪವನ್ನು ಆರಿಸಿರುವರೋ ಇಲ್ಲವೋ ನೋಡಬೇಕೆಂದು ತಾನೇ ಹೊರಟನು ಪಾಳೆಯವೆಲ್ಲ ಕತ್ತಲೆಯಾಗಿದ್ದಿತು ಆದರೆ ಒಂದು ಡೇರೆಯಲ್ಲಿ ಮಾತ್ರ ಮಿಣಮಿಣಕನೆ ದೀಪವು ಬಹು ಸಣ್ಣಗೆ ಉರಿಯುತಿದ್ದಿತು ಅದನ್ನು ನೋಡಿ ನೆಟ್ಟಗೆ ಆ ಬಿಡಾರಕ್ಕೆ ಹೋದನು ಅದು ಒಬ್ಬ ದಳಪತಿಯ ಬಿಡಾರವು ಅವನು ಒಂದು ಕಾಗದಕ್ಕೆ ಅರಗಿನಿಂದ ಮೊಹರು ಮಾಡುತಿದ್ದನು

ದೊರೆಯು ಆ ಬಿಡಾರದೊಳಗೆ ಬಂದು ತನ್ನ ಅಪ್ಪಣೆಯನ್ನು ಮೀರಿ ದೀಪ ವನ್ನು ಇಟ್ಟಿರಲು ಕಾರಣವೇನೆಂದು, ಆ ದಳಪತಿಯನ್ನು ಕೇಳಿದನು ಅದಕ್ಕೆ ಆ ದಳಪತಿಯು ದೊರೆಯ ಮುಂದೆ ಮೊಳಕಾಲನ್ನು ಊರಿ ಕೈಮುಗಿದುಕೊಂಡು, ' ಮಹಾಸ್ವಾಮಿ, ಕ್ಷಮಿಸಬೇಕು ನಾಳೆಯದಿವಸ ಯುದ್ಧವು ನಡೆಯಬಹುದು ನಾನು ಬದುಕಿ ಬಂದರೆ ನಿಮ್ಮನ್ನು ನೋಡುವೆನೆಂದು ನನ್ನ ತಾಯಿಗೆ ಕಾಗದವನ್ನು ಬರೆದೆನು , ಮೊಹರುಮಾಡುತ್ತಿದ್ದೆನು , ಅಷ್ಟರಲ್ಲಿಯೇ ಕಾಲವು ಮೀರಿತು, ಮೊಹರು ಮಾಡಿ ದೀಪವನ್ನು ಆರಿಸಬೇಕೆಂದು ಸಣ್ಣಗೆ ಮಾಡಿದೆನು ' ಎಂದನು

ಅದಕ್ಕೆ ದೊರೆಯು ' ತಾಳು, ಈಗಲೇ ಮೊಹರು ಮಾಡಬೇಡ, ದೊರೆಯ ಅಪ್ಪಣೆಯನ್ನು ಮೀರಿ ನಾನು ನಡೆದನಾದುದರಿಂದ, ಈ ಕಾಗದವು ನಿಮಗೆ ಮುಟ್ಟು ವುದಕ್ಕೆ ಮುಂದಾಗಿಯೆ ನನ್ನನ್ನು ಗುಂಡಿನಿಂದ ಸುಟ್ಟಿರುವರು ಎಂದು ಈ ಕಾಗದ ದಲ್ಲಿ ಬರೆದು ಆ ಮೇಲೆ ಮೊಹರು ಮಾಡು ಎಂದನು ದಳಪತಿಯು ಆ ಪತ್ರಿ ಯನ್ನು ಬರೆದು ಮೊಹರುಮಾಡಿ ಕಳುಹಿಸಿದುದೂ ಆಯಿತು ಅನಂತರ ಅವನನ್ನು ಗುಂಡಿನಿಂದ ಸುಟ್ಟುದೂ ಆಯಿತು

---

## ೭೯. ಸ್ನೇಹಿತರೂ ಕರಡಿಯೂ

ಇಬ್ಬರು ಸ್ನೇಹಿತರು ಕಾಲುದಾರಿಯಿಂದ ಒಂದು ಊರಿಗೆ ಹೊರಟರು. ಆ ದಾರಿಯಲ್ಲಿ ಒಂದು ದೊಡ್ಡಕಾಡು ಸಿಕ್ಕಿತು ಆ ಕಾಡಿನಲ್ಲಿ ದೊಡ್ಡ ದೊಡ್ಡ ಮರ ಗಳು ಒತ್ತಾಗಿ ಬೆಳದಿದ್ದುವು ಅದರಿಂದ ಅಲ್ಲಿ ಸೂರ್ಯನ ಕಿರಣಗಳು ಚೆನ್ನಾಗಿ

ಬೀಳುವುದಕ್ಕೆ ಅವಕಾಶವಿಲ್ಲದೆ ಕತ್ತಲೆಯಾಗಿದ್ದಿತು ಆದರೂ ಆ ಕಾಡಿನಲ್ಲಿಯೆ ಇಬ್ಬರೂ ಹೋಗುತ್ತಿದರು ಆಗ ದೂರದಲ್ಲ ಎಲ್ಲೋ ಒಂದು ಕಾಡುಮೃಗವು ಗುಟರಿ ಹಾಕಿದಂತೆ ಕೇಳಬಂದಿತು. ಸ್ವಲ್ಪಮುಂದೆ ಹೋಗುವುದರಲ್ಲಿ ಇನ್ನೂ ಹತ್ತಿರದಲ್ಲಿಯೆ ಕೇಳಬಂದಿತು

ಒಡನೆಯೆ ಒಬ್ಬನು ಸಮೀಪದಲ್ಲಿದ್ದ ಒಂದು ದೊಡ್ಡ ಮರವನ್ನೇರಿದನು ಇನ್ನೊಬ್ಬನಿಗೆ ಮರ ಹತ್ತುವುದಕ್ಕೆ ಬಾರದೆ ಇದ್ದುದರಿಂದ ದಿಕ್ಕುಕಾಣದೆ ನಿಂತಿದ್ದನು ಅಷ್ಟರಲ್ಲಿಯೆ ಒಂದು ಕರಡಿಯು ಸ್ವಲ್ಪ ದೂರದಲ್ಲಿ ಬರುತ್ತಿದ್ದಿತು ಅದನ್ನು ನೋಡಿ ಕರಡಿಯು ಸತ್ತವುಗಳನ್ನು ತಿನ್ನುವುದಿಲ್ಲವೆಂದು ಇವನು ಕೇಳಿದ್ದನಾದುದರಿಂದ ಸತ್ತವನಂತೆ ಉಸಿರು ಹಿಡಿದುಕೊಂಡು ಅಲ್ಲಯೇ ಮೈ ಕೈಗಳನ್ನಲ್ಲಾಡಿಸದಂತೆ ಮಲಗಿಕೊಂಡನು

ಕರಡಿಯು ಬಂದು ನೋಡಿ ಇವನನ್ನು ಹಣವೆಂದು ತಿಳಿದು ಮೈ ಕೈ ಕಿವಿಗಳನ್ನು ಮೂಸಿಮೂಸಿ ನೋಡಿ ಹೊರಟು ಹೋಯಿತು ಸ್ವಲ್ಪ ಹೊತ್ತಾದ ಮೇಲೆ ಅವನು '' ಬದುಕಿತು ನನ್ನ ಬಡ ಜೀವವೇ '' ಎಂದು ಎದ್ದು ಕುಳಿತನು ಅಷ್ಟರಲ್ಲಿಯೆ ಮರದ ಮೇಲೆ ಕುಳಿತಿದ್ದ ಆ ಸ್ನೇಹಿತನು ಬೇಗ ಇಳಿದು ಬಂದು ಕರಡಿಯು ನಿನ್ನ ಕಿವಿಯಲ್ಲಿ ಏನು ಹೇಳಿತು ? ಎಂದು ಕೇಳಿದನು ಅದಕ್ಕೆ ಅವನು ಏನೂ ಇಲ್ಲ ಇಷ್ಟೆ, ಕಷ್ಟಬಂದಾಗ ಬಿಡತಕ್ಕ ಸ್ನೇಹಿತನನ್ನು ನಂಬಬೇಡ ಎಂದು ಹೇಳಿತೆಂದನು ಆ ಮಾತಿಗ ಮರವನ್ನೇರಿದ ಸ್ನೇಹಿತನು ನಾಚಿಕೊಂಡು ತಲೆ ತಗ್ಗಿಸಿದನು.

---

## ೮೦ ಲದ್ದಿಮುಕ್ಸದ್ದಿಯ ಕಥೆ

ಒಂದಾನೊಂದು ಪಟ್ಟಣ ಆ ಪಟ್ಟಣದ ಅಂಗಡಿಯ ಬೀದಿಯಲ್ಲಿ ಬೇಕು ಬೇಕಾದ ಪದಾರ್ಥಗಳನ್ನು ಇಟ್ಟುಕೊಂಡು ಮಾರುತ್ತಿದ್ದರು ಒಂದು ದಿನ ಸಾಯಂಕಾಲ ಆ ಪಟ್ಟಣದ ದೊರೆಯ ಮಗನು ಸಾಮಾನ್ಯ ಜನರಂತೆ ಬಟ್ಟೆಯನ್ನು ಹಾಕಿಕೊಂಡು ಅಂಗಡಿಯ ಬೀದಿಯಲ್ಲಿ ಯಾವ ತೆರನಾದ ವ್ಯಾಪಾರಗಳು ನಡಿಯುವುವೆಂದು ತಿಳಿಯಲು ಹೊರಟನು ಒಂದು ಅಂಗಡಿಯಲ್ಲಿ ಜವಳಿ ವ್ಯಾಪಾರ, ಇನ್ನೊಂದು ಅಂಗಡಿಯಲ್ಲಿ ಜವಾಹಿರಿ ವ್ಯಾಪಾರ. ಮತ್ತೊಂದು ಅಂಗಡಿಯಲ್ಲಿ ಮುತ್ತಿನ ವ್ಯಾಪಾರ, ಹೀಗೆಯೇ ಒಂದೊಂದು ಅಂಗಡಿಯಲ್ಲಿ ಒಂದೊಂದು ತೆರನಾದ ವ್ಯಾಪಾರವು ನಡೆಯುತ್ತಿರಲು, ಪ್ರತಿಯೊಂದು ಅಂಗಡಿಯಲ್ಲೂ ಜನರು ತುಂಬಿದ್ದರು ಅದೇ ಸಾಲಿನಲ್ಲಿದ್ದ ಒಂದು ಅಂಗಡಿಯಲ್ಲಿ ಮಾತ್ರ ಪದಾರ್ಥಗಳೂ ಇರಲಿಲ್ಲ ಜನರೂ ಇರಲಿಲ್ಲ ಅಂಗಡಿಯವನು ಮಾತ್ರ ದೀಪದ ಮುಂದೆ ಹಳೆಯ ಕಡತಗಳನ್ನು ಹುಡುಕುತ್ತ ಕುಳಿತಿದ್ದನು ಅಂಗಡಿಯ ಮೇಲೆ, 'ಮಾತು ಮಾರುವ ಸ್ಥಳ' ಎಂದು ಬರೆದಿದ್ದಿತು ರಾಜ ಕುಮಾರನು ಇಲ್ಲೇನು ವಿಚಿತ್ರವಿರುವುದೋ ನೋಡೋಣವೆಂದು ಒಳಕ್ಕೆ ಬಂದು ಅಯ್ಯಾ ! ಇಲ್ಲಿ ಯಾವ ಮಾತನ್ನು ಮಾರು

ವಿರಿ ? ಬೆಲೆ ಎಷ್ಟು ? ಎಂದು ಕೇಳಿದನು ಅದಕ್ಕೆ ಕಡತಗಳನ್ನು ಹುಡುಕುತ್ತಿದ್ದವನು ತಲೆ ಯೆತ್ತಿನೋಡಿ ' ಮಗು, ಒಂದು ಮಾತಿಗೆ ಒಂದು ಲಕ್ಷವರಹ ' ಬೆಲೆಯೆಂದನು ಇದು ಎಂತಹ ಮಾತಿರಬಹುದು ! ಪರೀಕ್ಷಿಸಬೇಕೆಂದು ರಾಜ ಕುಮಾರನು ಅರಮನೆಗೆ ಹೋಗಿ ಹಣವನ್ನು ತೆಗೆದುಕೊಂಡು ಬಂದು ಲಕ್ಷ ವರಹ ಬಾಳುವ ಮಾತನ್ನು ಹೇಳು. ಅದನ್ನು ಮೊದಲು ಪರೀಕ್ಷಿಸಿ ಇಷ್ಟವಿದ್ದಲ್ಲಿ ಇತರ ಮಾತುಗಳನ್ನು ಕೊಂಡುಕೊಳ್ಳುವೆನು ಎಂದನು ಆಗ ಅಂಗಡಿಯವನು ಹಣವನ್ನು ತೆಗೆದುಕೊಂಡು ಈ ಮಾತನ್ನು ಹೇಳಿದನು ' ಅಯ್ಯಾ ನೀನು ಯಾವ ಕೆಲಸವನ್ನು ಮಾಡತೊಡಗಿದರೂ ಊಚು ನೀಚೆಂದು ನೋಡದೆ ಕೈಕೊಂಡ ಕಾರ್ಯವನ್ನು ಶ್ರದ್ಧೆಯಿಂದ ಮಾಡಿದಲ್ಲಿ ಮೇಲುಂಟು, ಎಂದನು

ಇದೇನು ಅಂತಹ ಮಾತು ! ಆದರೂ ಪರೀಕ್ಷಿಸೋಣವೆಂದು ಮನೆಗೆ ಬಂದು ತಂದೆಯ ಅಪ್ಪಣೆಯನ್ನು ಪಡೆದು ಒಬ್ಬನೇ ಹೊರಟನು

ಕೆಲವು ದಿನಗಳು ಸಂಚಾರಮಾಡಿ ಕೊನೆಗೆ ಯಾವುದೋ ಒಂದು ರಾಜಧಾನಿಯನ್ನು ಸೇರಿದನು ಅಲ್ಲಿ ಯಾವುದಾದರೂ ಒಂದು ಚಾಕರಿಯನ್ನು ಸಂಪಾದಿಸಬೇಕೆಂದು ಹಗಲು ರಾತ್ರಿ ಅಲ್ಲಿಯ ರಾಜನನ್ನು ಕಾದನು ಒಂದು ತಿಂಗಳಾಯಿತು, ಎರಡು ತಿಂಗಳಾಯಿತು, ಮೂರು ತಿಂಗಳೂ ಆಗುತ್ತ ಬಂದಿತು. ಪ್ರತಿದಿನವೂ ಬಂದು ತಪ್ಪದೆ ಕಾಯುತಿದ್ದ ಇವನನ್ನು ನೋಡಿ ನಿನಗೆ ಏನಾಗಬೇಕು ? ಎಂದು ರಾಜನು ಕೇಳಿದನು ಅದಕ್ಕೆ ಅವನು ' ಸ್ವಾಮಿ ! ನನಗೆ ಜೀವನಕ್ಕೆ ಅಪ್ಪಣೆಯಾಗಬೇಕು ' ಎಂದನು ಹಾಗೆಯೇ ವಿಚಾರಿಸುವಲ್ಲಿ ಲಾಯದಲ್ಲಿ ಲದ್ದಿ ಮುತ್ಸದ್ದಿ ಕೆಲಸವು ಖಾಲಿ ಇದೆಯೆಂದು ತಿಳಿದುಬಂದಿತು ಅದನ್ನೇ ಅಪ್ಪಣೆಯಾಗಬೇಕೆಂದು ಬೇಡಿಕೊಳ್ಳಲು ಆ ಕೆಲಸವು ದೊರೆಯಿತು ಲಕ್ಷ ವರಹ ಕೊಟ್ಟು ಕೊಂಡುಕೊಂಡ ಮಾತಿನ ಪ್ರಯೋಜನವು ಈಗ ಗೊತ್ತಾಗುವುದೆಂದು ತಿಳಿದು ಸಣ್ಣಗೆಲಸವೆಂದು ಅಸಡ್ಡೆಮಾಡದೆ, ಕಾಲಕಾಲಕ್ಕೆ ಹೋಗಿ ಶ್ರದ್ಧೆಯಿಂದ ಕೆಲಸಮಾಡಲು ತೊಡಗಿದನು

ಹಿಂದೆ ಹೆಸರಿಗೆ ಮಾತ್ರ ಒಬ್ಬ ಮುತ್ಸದ್ದಿ ಇದ್ದನು ಇವನು ಬಂದ ಮೇಲೆ ಮೆಲ್ಲಗೆ ಲದ್ದಿಯನ್ನೆಲ್ಲ ಒಂದು ಕಡೆ ಕೂಡಿಹಾಕಬೇಕೆಂದನು ಒಂದೆರಡು ವಾರದ ಮೇಲೆ ಹುಲ್ಲು ಹುರುಳಿ ಎಷ್ಟು ಕೊಡುತ್ತೀರಿ ? ಅಷ್ಟು ಹುಲ್ಲು ಹುರುಳಿ ಕೊಟ್ಟರೆ ಇಷ್ಟೇ ಲದ್ದಿಯೇ ? ಇನ್ನು ಮೇಲೆ ನನ್ನ ಇದಿರಾಗಿ ಕುದುರೆಗೆ ಹುಲ್ಲು ಹುರುಳಿಯನ್ನು ಕೊಡಬೇಕು ಹುಲ್ಲು ಎಷ್ಟು ಕಂತೆ ? ಹುರುಳಿ ಎಷ್ಟು ಸೇರು ? ಹುರುಳಿಯನ್ನು ಬೇಯಿಸುವುದಕ್ಕೆ ಸವುದೆ ಎಷ್ಟು ತೆಗೆದುಕೊಳ್ಳುತ್ತೀರಿ ? ಗೊಬ್ಬರವನ್ನು ಏನು ಮಾಡುತ್ತೀರಿ ? ಎಂದು ಚರ್ಚಿಸಿ ಪ್ರತಿಯೊಂದರಲ್ಲೂ ತನ್ನ ಯಜಮಾನನಿಗೆ ಆದಾಯವುಂಟಾಗುವಂತೆ ಚರ್ಚಿಸುತ್ತ ಲಾಯದ ಹುಟ್ಟುವಳಿಯು ಇಷ್ಟು ಹೆಚ್ಚಾಗಿದೆಯೆಂದು ನಿತ್ಯವೂ ರಾಜನಿಗ ತಿಳಿಸುತ್ತ ಬಂದನು ಇವನ ಕೆಲಸವು ಸಣ್ಣ ಕೆಲಸವಾದರೂ ಶ್ರದ್ಧೆಯಿಂದಲೂ ಸತ್ಯದಿಂದಲೂ ಕೆಲಸವನ್ನು ಮಾಡುತ್ತ ಬಂದುದರಿಂದ

ಜನರಿಗೆ ಇವನಲ್ಲಿ ಹೆದರಿಕೆಯೂ ಗೌರವವೂ ಉಂಟಾದುವು. ರಾಜನಿಗೆ ಇವನಲ್ಲಿ ನಂಬುಗೆಯೂ ವಿಶ್ವಾಸವೂ ಹುಟ್ಟಿತು ಲದ್ದಿ ಮುತ್ಸದ್ದಿ ಕೆಲಸದಲ್ಲಿಯೆ ಅಷ್ಟು ಬುದ್ಧಿವಂತಿಕೆಯನ್ನೂ ಶ್ರದ್ಧೆಯನ್ನೂ ಆದಾಯವನ್ನೂ ತೋರಿಸಿದವನು ದೊಡ್ಡ ದೊಡ್ಡ ಉದ್ಯೋಗದಲ್ಲಿ ವಿಶೇಷ ಆದಾಯವನ್ನುಂಟುಮಾಡುವನೆಂದು ತಿಳಿದು ಸ್ವಲ್ಪ ಕಾಲದಲ್ಲಿಯೆ ಇವನನ್ನು ಮಂತ್ರಿಯನ್ನಾಗಿ ಮಾಡಿಕೊಂಡನು ಕೆಲಕಾಲವಿದ್ದು ದೇಶವನ್ನು ಒಳ್ಳೆಯ ಸ್ಥಿತಿಗೆ ತಂದು ತರುವಾಯ ಆ ರಾಜಕುಮಾರನು ಹಿಂದಿರುಗಲು ಅಪ್ಪಣೆಯನ್ನು ಕೇಳಲು ರಾಜನು ಇವನ ವೃತ್ತಾಂತವನ್ನೆಲ್ಲ ತಿಳಿದು ಬಹಳ ಸಂತೋಷಪಟ್ಟು ತನ್ನ ಮಗಳನ್ನು ಕೊಟ್ಟು ವಿವಾಹ ಬಳೆಯಿಸಿ ಆರಾಜ್ಯವೀ ರಾಜ್ಯವೆರಡನ್ನೂ ಏಕ ರಾಜ್ಯಮಾಡಿ ಸುಖವಾಗಿ ಆಳುವಂತೆ ಅಳಿಯನಿಗೆ ಪಟ್ಟಾಭಿಷೇಕಮಾಡುತ್ತೇನೆಂದು ನಿಷ್ಕರ್ಷೆಮಾಡಿ ಈ ಮಹೋತ್ಸವಕ್ಕೆ ಆ ರಾಜ್ಯದ ಮಹಾರಾಜನನ್ನೂ ಪುರಜನರನ್ನೂ ಆ ಹಳೆಯ ಕಡತದ ಅಂಗಡಿಯವನನ್ನೂ ಕರೆಯಿಸಿಕೊಂಡು ಬಹು ವಿಜೃಂಭಣೆಯಿಂದ ವಿವಾಹ ಪಟ್ಟಾಭಿಷೇಕ ಮಹೋತ್ಸವಗಳನ್ನು ನೆರವೇರಿಸಿದನು

---

## ೬೧ ತಕ್ಕ ಶಿಕ್ಷೆ

ಒಬ್ಬ ಲೋಭಿಯು ನೂರು ರೂಪಾಯಿ ಹಾಕಿದ್ದ ಒಂದು ಚೀಲವನ್ನು ಕಳೆದುಕೊಂಡನು ಆದುದರಿಂದ ಆ ಚೀಲವನ್ನು ಹುಡುಕಿ ತಂದುಕೊಟ್ಟವರಿಗೆ ಹತ್ತು ರೂಪಾಯಿ ಬಹುಮಾನ ಕೊಡುವೆನೆಂದು ಊರಲ್ಲೆಲ್ಲ ಸಾರಿಸಿದನು. ಆ ಹಣದ ಗಂಟು ಒಬ್ಬ ಬಡವನಿಗೆ ಸಿಕ್ಕಿತು ಅವನು ಆ ಹಣದ ಗಂಟನ್ನು ತೆಗೆದುಕೊಂಡು ಬಂದು ಆ ಲೋಭಿಗೆ ತೋರಿಸಿ, ' ನಿನ್ನ ಹಣದ ಚೀಲವು ಇಗೋ ಇಲ್ಲಿರುವುದು. ನೀನು ಸಾರಿಸಿದ ಮೇರೆಗೆ ನನಗೆ ಹತ್ತು ರೂಪಾಯಿಯನ್ನು ಕೊಟ್ಟು ಇದನ್ನು ತೆಗೆದುಕೊಳ್ಳಬಹುದು ' ಎಂದನು.

ಲೋಭಿಗೆ ಆಶೆಯು ಹೆಚ್ಚಿತು ಹಣದ ಗಂಟನ್ನು ಹುಡುಕಿ ತಂದವನಿಗೆ ಹತ್ತು ರೂಪಾಯಿಗಳನ್ನು ಕೊಡಬಾರದೆಂದಾಲೋಚಿಸಿ, ' ಈ ಗಂಟಿನಲ್ಲಿ ನೂರು ಹತ್ತು ರೂಪಾಯಿಗಳಿದ್ದುವು , ನೀನು ಹತ್ತು ರೂಪಾಯಿಗಳನ್ನು ತೆಗೆದುಕೊಂಡು ಇನ್ನೂ ಹತ್ತು ಕೊಡೆಂದು ಕೇಳುತ್ತೀಯಾ ? ಕೊಡುವುದಿಲ್ಲ ಹಣದ ಚೀಲವನ್ನು ಕೊಟ್ಟು, ನಡೆ ' ಎಂದನು ಪಾಪ, ಅವನು ಬಡವ, ಆದರೂ ಸತ್ಯವಾದಿ, ಸುಳ್ಳು ಹೇಳುವವನಲ್ಲ. ಲೋಭಿಯ ಮಾತನ್ನು ಕೇಳಿ ನಾನು ನಿನ್ನ ಗಂಟನ್ನು ಬಿಚ್ಚಿದವನೇ ಅಲ್ಲ, ಎಂದು ಬಹಳವಾಗಿ ಹೇಳಿಕೊಂಡನು ಲೋಭಿಯು ಕೇಳಲಿಲ್ಲ ಕೊನೆಗೆ ನ್ಯಾಯಾಧಿಪತಿಯ ಬಳಿಗೆ ಹೋದರು.

ಅಲ್ಲಿ ನ್ಯಾಯಾಧಿಪತಿಯು ಇಬ್ಬರು ಹೇಳಿದುದನ್ನೂ ಕೇಳಿ, ಆ ಬಡವನ ಮಾತು ನಿಜವೆಂದು ನಂಬಿ ಲೋಭಿಯ ಕಡೆಗೆ ತಿರುಗಿ, ' ನೀನು ಕಳೆದುಕೊಂಡ ಗಂಟಿನಲ್ಲಿ ನೂರು ಹತ್ತು ರೂಪಾಯಿಗಳು ಇದ್ದುವಲ್ಲವೆ ? ಎಂದನು ಹೌದಯ್ಯ,

ಇವನು ಹತ್ತು...ಮುಂತಾಗಿ' ಲೋಭಿಯು ಹಿಂದೆ ಹೇಳಿದುದನ್ನೆಲ್ಲ ಮತ್ತೆ ಹೇಳು ತಿರಲು, ನ್ಯಾಯಾಧಿಪತಿಯು 'ಸರಿತಾನೆ, ಈ ಚೀಲವನ್ನು ಅವನು ಬಿಚ್ಚಲಿಲ್ಲವೆಂದು ಚೆನ್ನಾಗಿ ಗೊತ್ತಾಗುವುದು. ಈ ಚೀಲದಲ್ಲಿ ನೂರು ಮಾತ್ರ ಇವೆ ಇದು ನೀನು ಕಳೆದುಕೊಂಡ ಚೀಲವಲ್ಲ ನೀನೀಗ ಹೋಗಬಹುದು' ಎಂದು ಹೇಳಿ, ತರು ವಾಯ ಆ ಬಡವನ ಕಡೆಗೆ ತಿರುಗಿ 'ಎಲಯ್ಯಾ! ನೀನು ನಿಜವನ್ನು ಹೇಳಿದೆ ಎಂದು ನನಗೆ ತೋರುವುದು ಈ ಹಣದ ಗಂಟು ನಿನ್ನಲ್ಲಿಯೇ ಇನ್ನೂ ಹದಿನೈದು ದಿನಗಳು ಇರಲಿ ಅದುವರೆಗೆ ಈ ಗಂಟನ್ನು ಕಳೆದುಕೊಂಡವನು ಬಾರದಿದ್ದರೆ ಇದನ್ನು ನೀನೇ ಉಪಯೋಗಿಸಿಕೊ' ಎಂದನು

---

## ೮೨. ಒಕ್ಕಟ್ಟಿನ ಬಲ

ಒಬ್ಬ ಮುದುಕನಿಗೆ ನಾಲ್ಕು ಮಂದಿ ಗಂಡುಮಕ್ಕಳಿದ್ದರು ಇವರಲ್ಲಿ ಒಬ್ಬ ನನ್ನು ಕಂಡರೆ ಇನ್ನೊಬ್ಬನಿಗೆ ಆಗುತಿರಲಿಲ್ಲ. ಎಲ್ಲರೂ ಜಗಳವಾಡುತಿದ್ದರು ಮುದುಕ ತಂದೆಯು ಏನುಮಾಡಿದರೂ ಈ ಮಕ್ಕಳು ಸ್ನೇಹವಾಗುತಿರಲಿಲ್ಲ ಒಂದು ದಿನ ಆ ಮುದುಕನು ಮಕ್ಕಳನ್ನೆಲ್ಲ ಕರೆದು ಅವರ ಮುಂದೆ ಕಟ್ಟಿಗೆಯ ಒಂದು ಪಿಂಡಿಯನ್ನಿಟ್ಟು, 'ಒಬ್ಬೊಬ್ಬರಾಗಿ ಬಂದು ಈ ಕಟ್ಟಿಗೆಯ ಪಿಂಡಿಯನ್ನು ಮುರಿ ಯಿರಿ' ಎಂದನು

ಒಬ್ಬೊಬ್ಬರಾಗಿ ಬಂದು ಆ ಪಿಂಡಿಯನ್ನು ಮುರಿಯಲಿಕ್ಕೆ ಎಷ್ಟೋ ಸಾಹಸ ಮಾಡಿದರು, ಸಾಧ್ಯವಾಗಲಿಲ್ಲ ಇಬ್ಬರಿಬ್ಬರು ಸೇರಿ ಯತ್ನಿಸಿದರೂ ಅದು ಮುರಿ ಯಲಿಲ್ಲ. ತರುವಾಯ, ಆ ಮುದುಕನು ಪಿಂಡಿಯನ್ನು ಬಿಚ್ಚಿ ಒಬ್ಬೊಬ್ಬನ ಕೈಯಲ್ಲಿ ಒಂದೊಂದು ಕಟ್ಟಿಗೆಯ ಸೀಳನ್ನು ಕೊಟ್ಟು 'ಈಗ ಮುರಿಯಿರಿ' ಎಂದನು. ಎಲ್ಲರೂ ಪಟಪಟನೆ ಮುರಿದು ಹಾಕಿದರು

ಆಗ ಮುದುಕನು 'ಮಕ್ಕಳಿರಾ! ಇದನ್ನು ನೋಡಿದಿರಾ? ಈ ಕಟ್ಟಿಗೆಯ ಪಿಂಡಿಯಂತೆ ನೀವೆಲ್ಲರೂ ಒಟ್ಟುಗೂಡಿದ್ದರೆ ನಿಮ್ಮನ್ನು ಮುರಿಯುವುದು ಬಹು ಕಷ್ಟ ವಾಗುವುದು ನೀವು ಬೇರೆಬೇರೆಯಾಗಿ ಗಟ್ಟಿಗರಾಗಿದ್ದರೆ ಆ ಕಟ್ಟಿಗೆಯ ಸೀಳಿನಂತೆ, ಸುಲಭವಾಗಿ ನಿಮ್ಮನ್ನು ಮುರಿದು ಹಾಕಬಹುದು ಎಂದನು

---

## ೮೩ ಹೆದರಿಕೆಯನ್ನು ತಿಳಿಯದ ಹುಡುಗ (ನೆಲ್‌ಸನ್)

ಐದು ವರ್ಷದ ಒಬ್ಬ ಚಿಕ್ಕ ಹುಡುಗನು ಬೇರೊಂದು ಊರಿನಲ್ಲಿದ್ದ ತನ್ನ ಅಜ್ಜಿಯ ಮನೆಗೆ ಹೋಗಿದ್ದನು ಒಂದು ದಿವಸ ಆಡುವುದಕ್ಕೆ ಹೊರಗೆ ಹೋದ ವನು ಎಷ್ಟು ಹೊತ್ತಾದರೂ ಬರಲೇ ಇಲ್ಲ ಮಗುವು ಬಹಳ ಹೊತ್ತಾದರೂ ಬಾರದೆ ಇದ್ದುದರಿಂದ ಮನೆಯವರೆಲ್ಲರೂ ದಿಗಿಲುಪಟ್ಟು ಹುಡುಕುವುದಕ್ಕೆ ಮೊದಲು ಮಾಡಿದರು,

ಹುಡುಕಿ ಹುಡುಕಿ ಎಲ್ಲರಿಗೂ ಬೇಸರವಾಯಿತು. ಕೊನೆಗೆ ಎಷ್ಟೋ ಹೊತ್ತಿನ ಮೇಲೆ ವೇಗವಾಗಿ ಹರಿಯುತಿದ್ದ ಒಂದು ಕಾಲುವೆಯನ್ನು ದಾಟಲು ಸಿದ್ಧನಾಗಿ ನಿಂತಿದ್ದ ಈ ಹುಡುಗನನ್ನು ಯಾರೋ ಕಂಡು ಮನೆಗೆ ಕರೆದುಕೊಂಡು ಬಂದರು

ಮನೆಗೆ ಬಂದಮೇಲೆ–ಅಜ್ಜಿಯು ಬಂದು 'ಯಾರನ್ನೂ ಸಂಗಡ ಕರೆದು ಕೊಳ್ಳದೆ ಒಬ್ಬನೇ ಏಕೆ ಹೋದೆಯಪ್ಪಾ! ಹೆದರಿಕೆಯಿಂದಾದರೂ ನೀನು ಮನೆಗೆ ಬಾರದೆ ಹೋದೆಯಲ್ಲಾ! ಎಂದಳು ಆದಕ್ಕೆ ಆ ಹುಡುಗನು–' ಅಜ್ಜಿ! ಹದರು ಏಕೆಯೆಂದರೇನು? ಅದನ್ನು ನಾನು ಕಂಡೇ ಇಲ್ಲವಲ್ಲ' ಎಂದನು

ಹೆದರಿಕೆಯನ್ನು ತಿಳಿಯದ ಈ ಹುಡುಗನೇ ಮಹಾಶೂರನೆಂದು ಹೆಸರು ಪಡೆದ ನೆಲ್‌ಸನ್ ಎಂಬವನು ಇಂಗ್ಲೆಂಡ್ ದೇಶವನ್ನು ಹಾಳುಮಾಡಬೇಕೆಂದು ಮೇಲೆ ಮೇಲೆ ಬಂದ ಫ್ರೆಂಚರ ಹಡಗು ಪಡೆಗಳನ್ನು ಅನೇಕಾವೃತ್ತಿ ಸಮುದ್ರದ ಮೇಲೆ ಸೋಲಿಸಿ, ಇವನು ಪ್ರಸಿದ್ಧಿಗೊಂಡನು

---

## ೮೪. ಅಪೂರ್ವವಾದ ಒಂದು ಕವಚ

ಇಂಗ್ಲೆಂಡ್ ದೇಶದಲ್ಲಿ ವೆಲಿಂಗ್‌ಟನ್ ಎಂಬ ಬಹು ಶೂರನಾದ ಸೇನಾಧಿಪತಿ ಯೊಬ್ಬನು ಇದ್ದನು ಇವನು ಇಂಗ್ಲೆಂಡ್ ದೇಶದ ಶತ್ರುಗಳನ್ನು ಅನೇಕ ಯುದ್ಧ ಗಳಲ್ಲಿ ಜಯಿಸಿದ್ದನು ಈ ಶೂರನ ಹತ್ತಿರಕ್ಕೆ ಒಬ್ಬ ಕೆಲಸಗಾರನು ಬಂದು ಅಪೂರ್ವವಾದ ಒಂದು ಪದಾರ್ಥವನ್ನು ತಂದಿರುವೆನೆಂದು ಹೇಳಿ ಕಳುಹಿಸಿದನು ವೆಲಿಂಗ್‌ಟನ್ನನು ಅವನನ್ನು ಬರಹೇಳಿದನು

ಕೆಲಸಗಾರನು ತಾನು ತಂದಿದ್ದ ಒಂದು ಕಬ್ಬಿಣದ ಕವಚವನ್ನು ಮುಂದಿಟ್ಟು 'ಮಹಾಸ್ವಾಮಿ, ಗುಂಡಿನಿಂದಲೂ ಭೇದಿಸಲಿಕ್ಕೆ ಆಗದ ಈ ಕಬ್ಬಿಣದ ಕವಚವನ್ನು ಬಹು ಕಷ್ಟಪಟ್ಟು ಮಾಡಿ ತಂದಿರುವೆನು. ತಾವು ಪರೀಕ್ಷಿಸಬೇಕು' ಎಂದನು ಆಗ ವೆಲಿಂಗ್‌ಟನ್ನನು 'ಓಹೋ! ಹಾಗಾದರೆ ನೀನು ಆ ಕವಚವನ್ನು ತೊಟ್ಟುಕೊ' ಎಂದು ಹೇಳಿ, ತನ್ನ ಸೇವಕನನ್ನು ಕರೆದು ಒಂದು ಬಂದೂಕನ್ನು ಬಾರ್‌ಮಾಡಿ ಒಬ್ಬ ಸಿಪಾಯಿಯೊಡನೆ ಕಳುಹಿಸುವಂತೆ ನಮ್ಮ ಸೇನಾನಾಯಕನಿಗೆ ಹೇಳು, ಎಂದನು

ಕಬ್ಬಿಣದ ಕವಚವನ್ನು ತೊಟ್ಟುಕೊಂಡು ನಿಂತಿದ್ದವನು ಹೇಳದೆ ಕೇಳದೆ ಓಡಿಹೋದನು ಅವನು ತಿರುಗಿ ಬರಲಿಲ್ಲ ಗುಂಡು ಹೊಡೆದರೂ ತಾಕದ ಅಪೂರ್ವವಾದ ಕಬ್ಬಿಣದ ಕವಚವನ್ನು ಕಳುಹಿಸಲೂ ಇಲ್ಲ

---

## ೮೫. ಬಡ ಬ್ರಾಹ್ಮಣನೂ ಗೌಡನೂ

ಒಬ್ಬ ಬಡ ಬ್ರಾಹ್ಮಣನು ನಡೆದು ಕೊಂಡು ಬಂದು ಸಂಜೆ ಏಳು ಗಂಟೆಯ ವೇಳೆಗೆ ಒಂದು ಹಳ್ಳಿಯನ್ನು ಸೇರಿದನು. ಆ ಹಳ್ಳಿಯಲ್ಲಿ ಸತ್ರವೇ ಆಗಲಿ, ಗುಡಿಯೇ ಆಗಲಿ, ಯಾವುದೂ ಇರಲಿಲ್ಲ ಬ್ರಾಹ್ಮಣನಿಗೆ ಬಹಳ ಹಸಿವಾಗಿದ್ದಿತು

ಆಗ ಅಡಿಗೆಯನ್ನಾದರೂ ಮಾಡಿ ಊಟಮಾಡಬೇಕೆಂದು ಐದು, ಆರು ಮನೆಗಳಿಗೆ ಹೋಗಿ, ಅಕ್ಕಿ, ಬೇಳೆ ಮೊದಲಾದುವನ್ನು ಕೇಳಿದನು. ಅಲ್ಲಿ ಏನೂ ಅನುಕೂಲವಾಗಲಿಲ್ಲ ಕೊನೆಗೆ ಗೌಡನ ಮನೆಗೆ ಹೋಗಿ 'ಏನು! ಗೌಡರೆ! ನನಗೆ ಭೋಜನ ಸಾಮಗ್ರಿಗಳನ್ನು ಕೊಡುತ್ತೀರೊ? ಇಲ್ಲವಾದರೆ ಹಿಂದಿನ ಊರಿನಲ್ಲಿ ಮಾಡಿದಂತೆ ಮಾಡಿಬಿಡಲೋ?' ಎಂದು ಸ್ವಲ್ಪ ಗಟ್ಟಿಯಾಗಿ ಕೇಳಿದನು.

ಅದಕ್ಕೆ ಗೌಡನು ಹದರಿ ಸಾಮಾನನ್ನೆಲ್ಲ ಕೊಡಿಸಿದನು ಬ್ರಾಹ್ಮಣನು ಅಡಿಗೆ ಮಾಡಿಕೊಂಡು ಊಟಮಾಡಿದ ಮೇಲೆ ಗೌಡನು ಬಂದು, 'ಸ್ವಾಮಿ! ಹಿಂದಿನ ಊರಿನಲ್ಲಿ ಏನುಮಾಡಿದಿರಿ? ಸ್ವಲ್ಪ ಹೇಳಿ' ಎಂದು ಆ ಬ್ರಾಹ್ಮಣನನ್ನು ಕೇಳಿದನು ಬ್ರಾಹ್ಮಣನು ನಗುತ್ತ 'ನಾನು ಮಾಡಿದುದೆ! ನಾನು ಮಾಡಿದುದು ಉಪವಾಸ' ಎಂದನು.

---

## ೮೬ ಸಿಕಂದರನ ಉದಾರತೆ

ಮೆಸಿಡೋನಿಯ ಎಂದು ಒಂದು ದೇಶ. ಆ ದೇಶಕ್ಕೆ ಸಿಕಂದರನು ದೊರೆಯಾಗಿದ್ದನು ಆ ದೊರೆಯು ಚಿಕ್ಕ ವಯಸ್ಸಿನಲ್ಲಿಯೇ ಪಟ್ಟಕ್ಕೆ ಬಂದನು ಒಡನೆಯೆ ಮಗ್ಗುಲ ರಾಜ್ಯಗಳನ್ನೆಲ್ಲ ಗೆದ್ದು, ಅವುಗಳಿಂದ ಕಪ್ಪವನ್ನೂ, ಕಾಣಿಕೆಯನ್ನೂ ತೆಗೆದುಕೊಂಡು ಹತ್ತಿರದಲ್ಲಿಯೆ ಇದ್ದ ಪಾರ್ಸಿದೇಶದ ಮೇಲೆ ದಂಡೆತ್ತಿ ಹೊರಟನು ಸ್ವಲ್ಪಕಾಲದಲ್ಲೆ ಆ ದೊಡ್ಡ ರಾಜ್ಯವನ್ನೂ ಗೆದ್ದು ಅಲ್ಲಿಗೆ ಸಮೀಪವಾಗಿರುವ ಹಿಂದೂಸ್ಥಾನಕ್ಕೆ ಬಂದನು ಇಲ್ಲಿಯೂ ಕೆಲವು ರಾಜರನ್ನು ಸೋಲಿಸಿ ಅವರಿಂದ ಬೇಕಾದಷ್ಟು ಬೆಳ್ಳಿ ಬಂಗಾರಗಳನ್ನು ತೆಗೆದುಕೊಂಡು ಕಾಡುಮಾರ್ಗವಾಗಿ ಹಿಂದಿರುಗಿದನು

ದಾರಿಯಲ್ಲಿ ಇವನ ಜನರೂ ದನ ಕರುಗಳೂ, ನೀರೂ ನೆರಳೂ ಇಲ್ಲದೆ ಬಹು ಶ್ರಮಪಟ್ಟುವು ಹಾಗೆ ದಾರಿ ನಡೆಯುತ್ತಿದ್ದಾಗ ಭಾರವನ್ನು ಹೊತ್ತು ಬಿಸಿಲಿನಲ್ಲಿ ನಡೆಯಲಾರದೆ ಒಂದು ಕುದುರೆಯು ಮುಗ್ಗರಿಸಿ ಬಿದ್ದಿತು ಅದರೊಡನೆ ಹೋಗುತ್ತಿದ್ದವನು ಅದರ ಮೇಲೆ ಇದ್ದ ಹಣದ ಚೀಲವನ್ನು ತನ್ನ ಹೆಗಲಿನ ಮೇಲೆ ಹಾಕಿಕೊಂಡು ಕುದುರೆಯನ್ನು ಮೆಲ್ಲಗೆ ಬಿಟ್ಟುಕೊಂಡು ಮುಂದೆ ಹೋಗುತಿದ್ದನು. ಅವನೂ ಸಾಕಾಗಿ ಕೆಳಗೆ ಬೀಳುತಿದ್ದನು ಇದನ್ನೆಲ್ಲ ನೋಡುತಿದ್ದ ಸಿಕಂದರನು 'ಆ ಹಣವೆಲ್ಲ ನಿನ್ನದು, ವಿಶ್ರಮಿಸಿಕೊಂಡು, ತೆಗೆದುಕೊಂಡು ಬಾ' ಎಂದು ಹೇಳಿ ಅವನ ಮನಸ್ಸನ್ನು ಸಂತೋಷಪಡಿಸಿದನು ಕೊನೆಗೆ ಪಾರ್ಸೀ ದೇಶವನ್ನು ಸಿಕಂದರನು ಸೇರಿ, ಆ ರಾಜ್ಯ ಈ ರಾಜ್ಯ, ಎರಡನ್ನೂ ಏಕ ರಾಜ್ಯಮಾಡಿ, ಸ್ವಲ್ಪ ಕಾಲ ಆಳುತಿದ್ದನು

---

## ೮೭. ಮೋಸಗಾರನಾದ ದೊರೆಯೂ ಹಾಸ್ಯಗಾರನಾದ ವಿದ್ವಾಂಸನೂ

ಒಬ್ಬ ದೊರೆಯು ಒಂದು ಸಣ್ಣ ದೇಶವನ್ನಾಳುತಿದ್ದನು ಆ ದೊರೆಗೆ ತಾನು ಹೆಚ್ಚಾಗಿ ಕೊಡತಕ್ಕವನು ಎಂದು ಹೆಸರು ಪಡೆಯಬೇಕೆಂದು ಆಶೆ ಇದ್ದಿತು ಆದರೆ ಅವನಲ್ಲಿ ಹಣವು ಹೆಚ್ಚಾಗಿರಲಿಲ್ಲ ಇದರ ಮೇಲೆ ಅವನು ಬಹಳ ಜಿಪುಣ

ಇವನು ತನ್ನ ರಾಜ್ಯಕ್ಕೆ ಬಂದ ವಿದ್ವಾಂಸರಿಗೆಲ್ಲ ಬೇಕಾದಷ್ಟು ಮರ್ಯಾದೆ ಮಾಡಿ ಕಳುಹಿಸುತಿದ್ದನು ಆ ವಿದ್ವಾಂಸನು ಆ ಊರು ಬಿಟ್ಟು ಹೊರಟ ಒಡನೆಯೆ ತನ್ನ ಸೇವಕರನ್ನು ಕಳುಹಿಸಿ ಅವರಲ್ಲಿದ್ದುದನ್ನೆಲ್ಲ ಹೊಡೆದು ಕಸಿದುಕೊಂಡು ಬಂದು ತನಗೆ ಒಪ್ಪಿಸುವಂತೆ ಆಜ್ಞಾಪಿಸುತ್ತಿದ್ದನು ಕೊಟ್ಟಿದ್ದುದನ್ನೆಲ್ಲ ದೊರೆಯೇ ಪುನಃ ಅಪಹರಿಸುವನೆಂದು ಯಾವ ವಿದ್ವಾಂಸನಿಗೂ ತಿಳಿದಿರಲಿಲ್ಲ

ಈ ಗುಟ್ಟನ್ನು ತಿಳಿದ ಒಬ್ಬ ಹಾಸ್ಯಗಾರನು ವಿದ್ವಾಂಸನಂತೆ ಬಂದು ದೊರೆಯನ್ನು ಮೆಚ್ಚಿಸಿದನು ದೊರೆಯು ಅವನಿಗೆ ಶಾಲು, ಧೋತ್ರ, ತೋಡೆ ಮುಂತಾದುದನ್ನೆಲ್ಲ ಕೊಟ್ಟನು ದೊರೆಯ ಅಪ್ಪಣೆಯನ್ನು ಪಡೆದು ಹೊರಡುವಾಗ, ಅವನು 'ನಾನು ದೂರ ದೇಶ ಹೋಗಬೇಕಾಗಿರುವುದರಿಂದ ಒಂದು ಕುದುರೆಯನ್ನು ಕೊಡಿಸಬೇಕು' ಎಂದು ದೊರೆಯನ್ನು ಕೇಳಿದನು ಕೊಟ್ಟುದು ಎಲ್ಲವೂ ಹಿಂದಿರುಗಿ ಬರುವುದೆಂದು ತಿಳಿದಿದ್ದ ದೊರೆಯು ಕುದುರೆಯನ್ನು ಕೊಡಿಸಿದನು

ಹಾಸ್ಯಗಾರನು ಶಾಲನ್ನು ತಲೆಗೆ ಸುತ್ತಿ ಗಂಟನ್ನು ಹೆಗಲಿಗೆ ಹಾಕಿ ತೋಡೆಯನ್ನು ಕೈಯಲ್ಲೇ ಹಿಡಿದುಕೊಂಡು ಕುದುರೆಯನ್ನು ಹಿಂದುಮುಂದಾಗಿ ಹತ್ತಿದನು ಅಲ್ಲಿದ್ದವರೆಲ್ಲರೂ ನಕ್ಕರು ದೊರೆಯು 'ಇದೇನು' ಎಂದು ಹಾಸ್ಯಗಾರನನ್ನು ಕೇಳಲು 'ಸ್ವಾಮಿ! ನನ್ನ ಹಿಂದುಗಡೆ ಇರುವ ತಮ್ಮ ಭಟರನ್ನೇ ಇದಿರು ನೋಡುತ್ತ, ಕುಳಿತಿರುತ್ತೇನೆ ಅವರು ಬಂದೊಡನೆ ಏಟು ತಿನ್ನದೆ ಎಲ್ಲವನ್ನೂ ಕೊಡಬೇಕೆಂದು ಕಾದಿರುತ್ತೇನೆ ಚಿತ್ತಕ್ಕೆ ಆಯಾಸ ಕೆಲಸವಿಲ್ಲ' ಎಂದನು ಅದಕ್ಕೆ ದೊರೆಯು ನಾಚಿಕೊಂಡು ತಲೆ ಬಾಗಿಸಿದನು

---

## ೮೮ ನಾಯಿಯು ಮೋಸಹೋದುದು

ಒಂದು ನಾಯಿಯು ಒಬ್ಬ ಕಟುಕರವನ ಅಂಗಡಿಯಿಂದ ಒಂದು ಮಾಂಸದ ತುಂಡನ್ನು ಕದ್ದು ಬಾಯಿಯಲ್ಲಿ ಕಚ್ಚಿಕೊಂಡು ಹೋಡಿಹೋಗುತ್ತ ದಾರಿಯಲ್ಲಿ ಒಂದು ಸಣ್ಣ ನದಿಯನ್ನು ದಾಟುವಾಗ ನೀರಿನಲ್ಲಿ ತನ್ನ ನೆಳಲನ್ನು ನೋಡಿತು

ಅದು ತನ್ನ ನೆಳಲೆಂದು ತಿಳಿಯದೆ-ಬೇರೊಂದು ನಾಯಿಯು ಬಾಯಿಯಲ್ಲಿ ಒಳ್ಳೆಯ ಮಾಂಸದ ತುಂಡನ್ನು ಕಚ್ಚಿಕೊಂಡಿರುವುದು, ಆ ತುಂಡನ್ನು ಹೇಗಾದರೂ ಕಿತ್ತುಕೊಳ್ಳಬೇಕು-ಎಂದು ಬಾಯನ್ನು ದೊಡ್ಡದಾಗಿ ತೆರೆದುಕೊಂಡು ನೀರಿನಲ್ಲಿ ಕಾಣುವ ನಾಯಿಯ ಮೇಲೆ ಫಕ್ಕನೆ ಬಿದ್ದಿತು.

ಆಗ ಅದರ ಬಾಯಲ್ಲಿದ್ದ ಮಾಂಸದ ತುಂಡೂ ನೀರಿನಲ್ಲಿ ಬಿದ್ದು ಹೋಯಿತು. ಹೀಗೆ ನಾಯಿಯು ಮೋಸಹೋಗಿ ತನ್ನಲ್ಲಿದ್ದುದನ್ನೂ ಕಳೆದುಕೊಂಡು ಬೆಪ್ಪಾಗಿ ನಿಂತಿತು

---

## ೮೯. ಮೈನಾ

ಒಂದು ದೊಡ್ಡದಾದ ಕೋಡುಗಲ್ಲಿನ ತುದಿಯಲ್ಲಿ ಒಂದು ಮೈನವು ಗೂಡು ಗಟ್ಟಿಕೊಂಡು ವಾಸವಾಗಿದ್ದಿತು ಕಲ್ಲುಕುಟಿಗರು ಆ ಕೋಡುಗಲ್ಲಿನ ಸುತ್ತಲಿರುವ ಕಲ್ಲು ಬಂಡೆಯಿಂದ ಚಪ್ಪಡಿಗಳನ್ನು ಎಬ್ಬಿಸಿ ತೆಗೆದುಕೊಂಡುಹೋಗುತ್ತಿದ್ದರು. ಅವರು ಒಂದೊಂದು ವೇಳೆ ಸುರಂಗವನ್ನು ಹಾಕಿ ಕಲ್ಲನ್ನು ಒಡೆಯುತ್ತಿದ್ದರು ಸುರಂಗ ಹಾಕಿದಾಗಲೆಲ್ಲ ಕಲ್ಲಿನಚೂರುಗಳು ಹಾರಿ ಇದರ ಗೂಡಿಗೆ ತಗುಲಿ ಇದಕ್ಕೂ ತೊಂದರೆಯಾಗುತಿದ್ದಿತು

ಸುರಂಗ ಹಾಕುವುದಕ್ಕೆ ಮುಂದಾಗಿ ಸೀಟಿಯನ್ನು ಹಾಕುತಿದ್ದರು ಇಲ್ಲ ದಿದ್ದರೆ ಕೊಂಬನ್ನು ಊದುತಿದ್ದರು ಆಗ ಅಲ್ಲಿ ಕೆಲಸಮಾಡುತಿದ್ದ ಜನರೆಲ್ಲರೂ ದೂರಹೋಗಿ ನಿಲ್ಲುತ್ತಿದ್ದರು ಮೈನವು ಇದನ್ನು ನೋಡಿಕೊಂಡಿದ್ದು ಕೊಂಬು ಅಥವಾ ಸೀಟಿಯನ್ನು ಊದಿದಕೂಡಲೆ ತನ್ನ ಮರಿಗಳೊಡನೆ ಗೂಡನ್ನು ಬಿಟ್ಟು ಹೂರೆಕ್ಕೆ ಬಂದು ಅವರಂತೆ ದೂರದಲ್ಲಿದ್ದು ಜನರೆಲ್ಲರೂ ಕೆಲಸಕ್ಕೆ ಹಿಂದಿರುಗಿದ ಮೇಲೆ ತಾನೂ ಹಿಂದಿರುಗುತಿದ್ದಿತು

ಇದರ ಬುದ್ಧಿಯನ್ನು ನೋಡಿದ್ದ ಕೆಲಸಗಾರರು ಅಲ್ಲಿಗೆ ಯಾರಾದರೂ ಹೂಸಬರು ಬಂದರೆ ಈ ಹಕ್ಕಿಯು ಮಾಡುವುದನ್ನು ಹೇಳಿ ಅವರನ್ನು ಸಂತೋಷ ಪಡಿಸುವುದಕ್ಕಾಗಿ ಸುಮ್ಮ ಸುಮ್ಮನೆ ಕೊಂಬನ್ನು ಊದಿ ಹಕ್ಕಿಯು ಮರಿಗಳೊಡನೆ ಗೂಡನ್ನು ಬಿಟ್ಟು ಹೂರಕ್ಕೆ ಬರುವುದನ್ನು ನೋಡಿ ವಿನೋದಪಡುತ್ತಿದ್ದರು. ಕೊನೆಗೆ ಆ ಹಕ್ಕಿಯು ಕೊಂಬು ಅಥವಾ ಸೀಟಿಯನ್ನು ಊದಿದೊಡನೆ ಹೊರಕ್ಕೆ ಬರುವುದನ್ನು ಬಿಟ್ಟು ಜನರೆಲ್ಲರೂ ಹೂರಟುದನ್ನು ನೋಡಿ ತಾನೂ ಹೊರಡುವ ಪದ್ಧತಿಯನ್ನಿಟ್ಟಿತು.

---

## ೯೦ ಸಿಡ್ನಿ

ಇಂಗ್ಲೆಂಡ್ ದೇಶವನ್ನು ಎಲಿಜಬೆತ್ ಎಂಬ ರಾಣಿಯು ಆಳುತ್ತಿದ್ದಳು. ಇವಳ ಆಸ್ಥಾನದಲ್ಲಿ ಸಿಡ್ನಿ ಎಂಬವನೊಬ್ಬನು ಇದ್ದನು ಇವನು ಪಂಡಿತನೆಂದೂ, ಶೂರನೆಂದೂ ಹೆಸರುವಾಸಿಯಾಗಿದ್ದನು

ರಾಣಿಯು ಇವನನ್ನು ಒಂದು ಯುದ್ಧಕ್ಕೆ ಕಳುಹಿಸಿದಳು ಯುದ್ಧದಲ್ಲಿ ಇವನಿಗೆ ಏಟುಬಿದ್ದಿತು ಇವನನ್ನು ಯುದ್ಧರಂಗದಿಂದ ಹೊರಕ್ಕೆ ಕರೆದುಕೊಂಡು ಬಂದರು. ಆಗ ಇವನು ಬಹು ಬಾಯಾರುವುದೆಂದು ನೀರನ್ನು ಕೇಳಿದನು.

ಒಂದು ಬಟ್ಟಲು ನೀರು ಸಿಕ್ಕುವುದೇ ಬಹು ಕಷ್ಟವಾಗಿ ಕೊನೆಗೆ ಸ್ವಲ್ಪ ನೀರನ್ನು ತಂದುಕೊಟ್ಟರು ಅದನ್ನು ಕುಡಿಯುವುದಕ್ಕಾಗಿ ಬಟ್ಟಲನ್ನು ಬಾಯಿಯವರೆಗೆ ತೆಗೆದುಕೊಂಡು ಹೋದನು

ಅಷ್ಟರಲ್ಲಿಯೇ, ಬಹಳವಾಗಿ ಪೆಟ್ಟು ತಿಂದು ಸಂಕಟಪಡುತ್ತಿದ್ದ ಒಬ್ಬನು, ಸಿಡ್ನಿಯು ಹಿಡಿದುಕೊಂಡಿದ್ದ ನೀರಿನ ಬಟ್ಟಲನ್ನೇ ನೋಡುತಿದ್ದುದರಿಂದ, ಇವನು 'ನನಗಿಂತಲೂ ಅವನಿಗೆ ಹೆಚ್ಚಾಗಿ ಬಾಯಾರುತಿರಬಹುದು ಇದನ್ನು ಅವನಿಗೆ ಕೊಡಿ,' ಎಂದು ಹೇಳಿ, ತನ್ನ ಕೈಯಲ್ಲಿದ್ದುದನ್ನು ಕೊಟ್ಟು ನೀರು ಕುಡಿಯದೆ ಪ್ರಾಣವನ್ನು ಬಿಟ್ಟನು

---

## ೯೧ ದೊರೆಯ ತಾಳ್ಮೆ

ಇಂಗ್ಲೆಂಡ್ ದೇಶವನ್ನು ಜಾರ್ಜ್ ಎಂಬ ದೊರೆಯು ಆಳುತಿದ್ದನು. ಒಂದುದಿನ ಸಾಯಂಕಾಲ ಬೇಸರದಿಂದ ಅವನು ಒಬ್ಬನೇ ಸುತ್ತಾಡಿಕೊಂಡು ಬರಲು ಹೊರಟನು ಊರಿಂದ ಹೊರಗೆ ಸ್ವಲ್ಪ ದೂರ ಹೋಗುವುದರಲ್ಲಿಯೇ ಒಂದು ಹುಲ್ಲಿನ ಮೈದಾನವು ಸಿಕ್ಕಿತು ಅಲ್ಲಿ ಒಬ್ಬಳೇ ಒಬ್ಬ ಹಂಗಸು ಹುಲ್ಲು ಕೊಯ್ಯು ತ್ತಿದ್ದುದನ್ನು ದೊರೆಯು ನೋಡಿದನು.

"ನಿನ್ನ ಜತೆಗಾತಿಯರೆಲ್ಲ ಎಲ್ಲಿ? ನೀನು ಒಬ್ಬಳೇ ಇಷ್ಟು ಹೊತ್ತಿನವರೆಗೂ ಇಲ್ಲಿಯೇಕೆ ಇದ್ದೀಯೆ?' ಎಂದು, ದೊರೆಯು ಅವಳನ್ನು ಕೇಳಲು, 'ನನ್ನ ಜತೆ ಗಾತಿಯರೆಲ್ಲರೂ ದೊರೆಯ ಮೆರವಣಿಗೆಯನ್ನು ನೊಡಲಿಕ್ಕೆ ಹೋದರು' ಎಂದು ಅವಳು ಹೇಳಿದಳು 'ಹಾಗಾದರೆ, ಅವರೊಡನೆ ನೀನು ಏತಕ್ಕೆ ಹೊಗಲಿಲ್ಲ'? ಎಂದು ದೊರೆಯು ಕೇಳಿದನು ಹುಲ್ಲು ಕೊಯ್ಯುವುದನ್ನು ಸ್ವಲ್ಪ ಬಿಟ್ಟು, ಅವಳು 'ನಾನೇನು ಅವರೆಲ್ಲರ ಹಾಗೆ ಹುಚ್ಚಳೆ? ಅವರಿಗಂತೂ ಬುದ್ಧಿ ಇಲ್ಲ, ಹೋದರು! ನಾನು ದೊರೆಯನ್ನು ನೋಡಲಿಕ್ಕೆ ಹೋದರೆ ನನ್ನ ಐದು ಮಕ್ಕಳ ಹೊಟ್ಟೆಗೆ ಏನು ಗತಿ? ನೋಡಲಿಕ್ಕೆ ಅವರೊಡನೆ ಹೋಗುವಷ್ಟು ಭಾಗ್ಯವನ್ನು ನಾನು ಪಡೆದಿಲ್ಲವಲ್ಲ' ಎಂದಳು.

ಇದನ್ನು ಕೇಳಿ ದೊರೆಯು ಜೇಬಿನಿಂದ ಒಂದು ಭಂಗಾರದ ನಾಣ್ಯವನ್ನು ತೆಗೆದು, 'ದೊರೆಯನ್ನು ನೋಡಲಿಕ್ಕೆ ಹೋಗಿರುವ ನಿನ್ನ ಜತೆಗಾತಿಯರು ಬಂದ ಮೇಲೆ ಅವರಿಗೆ ಹೀಗೆ ಹೇಳು, ನೀವೆಲ್ಲರೂ ದೊರೆಯನ್ನು ನೋಡಲಿಕ್ಕೆ ಹೋದಿರಿ, ನನ್ನನ್ನು ನೋಡಲಿಕ್ಕೆ ದೊರೆಯೇ ಇಲ್ಲಿಗೆ ಬಂದು, ತನ್ನ ಪ್ರತಿಮೆಯುಳ್ಳ ಈ ನಾಣ್ಯ ವನ್ನು ನನಗೆ ಕೊಟ್ಟನು' ಎಂದು ಅವಳಿಗೆ ಹೇಳಿ ಆ ನಾಣ್ಯವನ್ನು ಕೊಟ್ಟು ನಗುತ್ತ ಹೊರಟು ಹೋದನು. ಆಗ ಆ ಹುಲ್ಲು ಕೊಯ್ಯುವಳು ಗಡಗಡನೆ ನಡುಗುತ್ತ ದೊರೆಗೆ ಅಡ್ಡಬಿದ್ದಳು

---

## ೯೨. ತೆನ್ನಾಲರಾಮಕೃಷ್ಣನೂ ಕಳ್ಳರೂ

ತೆನ್ನಾಲರಾಮಕೃಷ್ಣನು ಪ್ರಸಿದ್ಧನಾದ ಒಬ್ಬ ಹಾಸ್ಯಗಾರನು ಇವನು ಬಹಳ ಹಣವನ್ನು ಸಂಪಾದಿಸಿಟ್ಟಿರಬಹುದೆಂದು ಕಳ್ಳರು ಆಲೋಚಿಸಿ ಒಂದು ರಾತ್ರಿ ಇವನ ಮನೆಗೆ ನುಗ್ಗುವ ಪ್ರಯತ್ನದಲ್ಲಿದ್ದರು ತೆನ್ನಾಲರಾಮಕೃಷ್ಣನು ತನ್ನ ಮನೆಯ ಹಿತ್ತಿಲಿಗೆ ಕಳ್ಳರು ಬಂದಿರುವ ಸುಳಿವನ್ನು ತಿಳಿದು ಬೇಗ ಬೇಗ ತನ್ನ ಆಸ್ತಿಯನ್ನೆಲ್ಲ ಒಂದು ಕಡ ಭದ್ರಪಡಿಸಿಟ್ಟನು ತರುವಾಯ ಹಂಡತಿಯನ್ನು ಕೂಗಿ ಈ ಊರಲ್ಲಿ ಕಳ್ಳರ ಕಾಟವು ಈಗ ಹಚ್ಚಾಗಿದೆ ನಮ್ಮ ಆಸ್ತಿಯನ್ನೆಲ್ಲ ಇಟ್ಟಿರುವುದು ಸರಿಯಲ್ಲ ಒಂದು ಪೆಟ್ಟಿಗೆಯಲ್ಲಿ ಒಡವೆ, ಹಣಕಾಸುಗಳನ್ನು ಹಾಕಿ ಹಿತ್ತಿಲಲ್ಲಿರುವ ಏತದ ಬಾವಿಯಲ್ಲಿ ಪೆಟ್ಟಿಗೆಯನ್ನು ಈಗ ಮುಳುಗಿಸಿರೋಣ, ಮುಂದೆ ಒಳ್ಳೆಯಕಾಲ ಬಂದಮೇಲೆ ತೆಗೆಯೋಣ ನಿನ್ನ ಮೇಲಿರುವುದನ್ನೆಲ್ಲ ಕೊಡು, ಎಂದು ಕಳ್ಳರು ಕೇಳುವಂತೆ ಗಟ್ಟಿಯಾಗಿ ಹೇಳಿದನು

ಇವನ ಆಸ್ತಿಯೆಲ್ಲ ತಮಗೆ ಸುಲಭವಾಗಿ ಸಿಕ್ಕಿತೆಂದು ಕಳ್ಳರು ಸಂತೋಷ ಪಡುತ್ತಿದ್ದರು ಇತ್ತ ತೆನ್ನಾಲರಾಮಕೃಷ್ಣನು ಒಡಕು ಮುರುಕು ಪಾತ್ರೆಗಳನ್ನೆಲ್ಲ ಒಂದು ದೊಡ್ಡ ಪೆಟ್ಟಿಗೆಗೆ ಹಾಕಿ ಮಗನೂ ತಾನೂ ಅದನ್ನು ಎತ್ತಿಕೊಂಡು ಬಂದು ಬಾವಿಯೊಳಗೆ ಇಳಿಸಿಬಿಟ್ಟು ಹಿಂದಿರುಗಿದರು

ಕಳ್ಳರು ಬಾವಿಯಲ್ಲಿ ಇಳಿದು ನೀರು ಹಚ್ಚಾಗಿದ್ದುದರಿಂದ ಪೆಟ್ಟಿಗೆಯನ್ನು ಸಾಗಿಸಿಕೊಳ್ಳಲಾರದೆ ನೀರನ್ನು ತೆಗೆದು ಹಾಕಬೇಕೆಂದು ರಾತ್ರಿಯೆಲ್ಲ ಏತವನ್ನು ಹೊಡೆದು ನೀರನ್ನು ಎತ್ತುತ್ತಿದ್ದರು ತೆನ್ನಾಲರಾಮಕೃಷ್ಣನು ಮರೆಯಲ್ಲಿದ್ದು ಹಿತ್ತಲ ತೋಟಕ್ಕೆಲ್ಲ ನೀರು ಹಾಯಿಸಿದನು ಅಷ್ಟರಲ್ಲಿಯೇ ಬೆಳಗಾಗುತ್ತ ಬಂದಿತು ಆಗ ರಾಮಕೃಷ್ಣನು ತೋಟಕ್ಕೆ ನೀರು ಸಾಕು ಬೆಳಗಾಗುತ್ತ ಬಂದಿತು ನೀವೆಲ್ಲರೂ ಹೋಗಬಹುದು, ಎಂದು ಕಳ್ಳರಿಗೆ ಕೇಳುವಂತೆ ಹೇಳಿದನು ಸುಮ್ಮನೆ ಬಿಟ್ಟರೆ ಸಾಕೆಂದು ಕಳ್ಳರು ಓಡಿದರು

---

## ೯೩ ಮಹಿಸೂರು ಸೈನ್ಯವೂ ಮರಾಟೆಯವರೂ

ಶ್ರೀರಂಗಪಟ್ಟಣದಲ್ಲಿ ಬಹಳವಾಗಿ ಹಣ ಸಿಕ್ಕುವುದೆಂಬ ಆಶೆಯಿಂದ ಮರಾಟೆ ಸೈನ್ಯವೊಂದು ಹಿಂದಕ್ಕೆ ಒಂದಾವೃತ್ತಿ ಪಟ್ಟಣಕ್ಕೆ ಸಮೀಪದಲ್ಲಿ ಬಂದಿಳಿಯಿತು. ಪಟ್ಟಣದಲ್ಲಿ ಮರಾಟೆಯವರನ್ನು ಸೋಲಿಸಿ ಓಡಿಸುವಷ್ಟು ಸೈನ್ಯವು ಇರಲಿಲ್ಲ. ಮರಾಟೆಯವರು ಪಟ್ಟಣವನ್ನು ನುಗ್ಗುವಷ್ಟರಲ್ಲಿಯೇ ಹೊರಗೆ ಹೋಗಿದ್ದ ಸ್ವಲ್ಪ ಸೈನ್ಯವು ಬಂದು ಬಹು ಉಪಾಯದಿಂದ ಬಲವಾದ ಮರಾಟೆಯವರನ್ನು ಓಡಿಸಿತು.

ಮಹಿಸೂರು ಸೈನ್ಯವನ್ನು ತೆಗೆದುಕೊಂಡು ಬಂದ ದೊಡ್ಡಯ್ಯನೆಂಬವನು ರಾತ್ರಿಯಲ್ಲಿ ಎತ್ತಿನ ಕೊಂಬುಗಳಿಗೆ ಪಂಜುಗಳನ್ನು ಕಟ್ಟಿಸಿ ದೀಪಗಳನ್ನು ಹಚ್ಚಿಸಿ, ಆ ಹಿಂಡನ್ನು ಮರಾಟೆಯವರ ಪಾಳಯಕ್ಕಿದಿರಾಗಿ ಹೊರಡಿಸಿದನು. ಮರಾಟೆಯ

ವರು ದೀಪಗಳು ಬರುತ್ತಿರುವ ದಿಕ್ಕಿನಿಂದಲೇ ಮಹಿಸೂರು ಸೈನ್ಯವು ಬರುತ್ತಿದೆ, ಎಂದಾ ಲೋಚಿಸುತ್ತಿರಲು ದೊಡ್ಡಯ್ಯನು ಹಿಂದುಗಡೆಯಿಂದ ಸೈನ್ಯವನ್ನು ತೆಗೆದುಕೊಂಡು ಹೋಗಿ ಭ್ರಾಂತಿಗೊಂಡ ಮರಾಟಿಯವರ ಮೇಲೆ ಬಿದ್ದು ಅವರನ್ನು ಓಡಿಸಿದನು

---

## ೯೪. ಚಿತ್ರಗಾರ ಥಾರ್ನಹಿಲ್

ಥಾರನ್‌ಹಿಲ್ ಎಂಬ ಚಿತ್ರಗಾರನೊಬ್ಬನು ಎತ್ತರವಾಗಿ ಕಟ್ಟಿದ್ದ ಒಂದು ಭುವನೇಶ್ವರಿಯಲ್ಲಿ ಸೊಗಸಾದ ಚಿತ್ರಗಳನ್ನು ಬರೆಯುತ್ತಿದ್ದನು ಒಂದು ದಿನ ಚೆನ್ನಾದ ಒಂದು ಚಿತ್ರವನ್ನು ಬರೆದು ಅದು ದೂರಕ್ಕೆ ಅಂದವಾಗಿ ಕಾಣುವುದೋ ಇಲ್ಲವೋ ನೋಡಬೇಕೆಂದು ಆ ಚಿತ್ರದ ಮೇಲೆಯೆ ಕಣ್ಣಿಟ್ಟು ಹಿಂದೆ ಹಿಂದೆ ಹೋಗು ತ್ತಿದ್ದನು ಎತ್ತರವಾದ ಭುವನೇಶ್ವರಿಯಲ್ಲಿ ಕೆಲಸಮಾಡಲು ಕಾಲಾವದಿಯನ್ನು ಕಟ್ಟಿದ್ದರು. ಇವನು ಕಾಲಾವದಿಯ ಕೊಟ್ಟಕೊನೆಗೆ ಒಂದಿದ್ದನು ಇನ್ನೊಂದು ಹಜ್ಜೆ ಹಿಂದೆ ಇಟ್ಟಿದ್ದರೆ ಅಲ್ಲಿಂದ ಬಿದ್ದು ಒಡನೆಯೆ ಸಾಯುತ್ತಿದ್ದನು

ಆಗ, ಅಲ್ಲಿ ಬಣ್ಣ ಬೆರಸುತ್ತ ಕುಳಿತಿದ್ದ ಅವನ ಸೇವಕನು ತನ್ನ ಯಜಮಾನ ನಿದ್ದ ಅಪಾಯಸ್ಥಿತಿಯನ್ನು ನೋಡಿ ಕೂಗಿಕೊಂಡರೆ ಹೆದರಿಕೆಯಲ್ಲಿ ಕಾಲು ತಪ್ಪಿ ಬಿದ್ದು ಸಾಯುವನೆಂದು ಕೂಗದೆ, ತನ್ನ ಹತ್ತಿರವಿದ್ದ ಬಣ್ಣದ ಬಟ್ಟಲನ್ನು ತೆಗೆದು ಆ ಚಿತ್ರದ ಮೇಲೆ ಎರಚಿದನು ಬಣ್ಣಬಿದ್ದು ಚಿತ್ರವು ಕೆಟ್ಟುಹೋಯಿತು ಅಷ್ಟು ಸೊಗಸಾಗಿ ಬರೆದಿದ್ದ ಆ ಚಿತ್ರವನ್ನು ಹುಚ್ಚನಂತೆ ಸೇವಕನು ಹಾಳುಮಾಡಿದನೆಂದು ಕೋಪದಿಂದ ಸರ್‍ರನೆ ಅವನನ್ನು ಹೊಡೆಯುವುದಕ್ಕೆ ಮುಂದೆ ಬಂದನು

ಆ ಸೇವಕನು ಅವನಿದ್ದ ಅಪಾಯಸ್ಥಿತಿಯನ್ನು ತಿಳಿಸಿ, ಆ ಉಪಾಯ ಮಾಡದಿದ್ದರೆ, ಅವನು ಕೆಳಕ್ಕೆ ಬಿದ್ದು ಸಾಯುತ್ತಿದ್ದನೆಂದು ಹೇಳಿದನು ಸಮಯ ದಲ್ಲಿ ಧೈರ್ಯವನ್ನು ತಂದುಕೊಂಡು ಉಪಾಯದಿಂದ ತನ್ನನ್ನು ಬದುಕಿಸಿದ ಆ ಸೇವಕನನ್ನು ಥಾರನ್‌ಹಿಲ್ಲನು ಕೊಂಡಾಡಿದನು

---

## ೯೫ ಹ್ಯಾನಿ ಬಾಲನ ಪ್ರತಿಜ್ಞೆ

ಲೋಕೈಕವೀರನಾದ ಹ್ಯಾನಿಬಾಲನು ಧೀರನಾದ ಹ್ಯಾಮಿಲ್ಕಾರನ ಮಗನು ಇವನು ಕಾರ್ಥೆಜ್ ಪಟ್ಟಣ ವಾಸಿ ಈ ಪಟ್ಟಣವು ಭೂಮಧ್ಯ ಸಮುದ್ರದ (ಮೆಡಿಟರೇನಿಯನ್) ದಕ್ಷಿಣ ತೀರದಲ್ಲಿ ಪ್ರಸಿದ್ಧಿಗೊಂಡಿದ್ದಿತು ಇಲ್ಲಿಯ ಜನರಿಗೂ ಜಗದ್ವಿಖ್ಯಾತರಾದ ರೋಮಕರಿಗೂ ಯುದ್ಧವು ಆರಂಭವಾಯಿತು ಈ ಯುದ್ಧ ದಲ್ಲಿ ಕಾರ್ಥೆಜಿನ ದಳಪತಿಯಾದ ಹ್ಯಾಮಿಲ್ಕಾರನು ಬಹಳವಾಗಿ ಹೋರಾಡಿ ರೋಮ ಕರನ್ನು ನಿರ್ಮೂಲ ಮಾಡಲು ವ್ಯಾಪಾರಾಸಕ್ತರಾದ ಕಾರ್ಥೆಜಿನವರಿಂದ ಸಾಧ್ಯವಲ್ಲ ವೆಂದು ತಿಳಿದು ರೋಮಕರೊಡನೆ ಸಮಾಧಾನಮಾಡಿಕೊಂಡು ಸ್ಪೈನ್ ದೇಶಕ್ಕೆ ತನ್ನ ಕುಟುಂಬ ಸಮೇತ ಹೊರಟು ಅಲ್ಲಿ ಜನರನ್ನು ಕಟ್ಟಿ ರೋಮಕರನ್ನು ಹತಮಾಡಲು ಸಿದ್ಧನಾಗುತ್ತಿದ್ದನು.

ಅವನ ಅನಂತರ ದಳಪತಿಯಾದ ಹ್ಯಾನಿಬಾಲನು ತಂದೆಯ ಸಂಕಲ್ಪವನ್ನು ನೆರವೇರಿಸಲು ದೊಡ್ಡ ಸೈನ್ಯವನ್ನು ಕಟ್ಟಿದನು ಆ ಸೈನ್ಯದಲ್ಲಿ ನಾನಾ ದೇಶದ ಯೋಧರಿದ್ದರು ಅವರೆಲ್ಲರೂ ಹ್ಯಾನಿಬಾಲನ ಧೈರ್ಯಕ್ಕೂ, ಯುಕ್ತಿಗೂ, ಶಕ್ತಿಗೂ, ಆದರಕ್ಕೂ ಮೆಚ್ಚಿ ಅವನಿಗೆ ಅಡಿಯಾಳಾಗಿದ್ದರು ಅಂತಹ ವೀರ ಭಟರೊಡನೆ ಹೊರಟು, ತುಂಬಿದ ಹೊಳೆಗಳನ್ನು ಹಾಯ್ದು, ಪರ್ವತಶ್ರೇಣಿಗಳನ್ನು ದಾಟಿ, ಕಾಡು ಜನರನ್ನು ಸ್ವಾಧೀನಪಡಿಸಿಕೊಂಡು, ರೋಮಕ ಯೋಧರನ್ನು ತಪ್ಪಿಸಿ ದುರ್ಗಮವಾದ ಆಲ್ಪ್ಸ ಪರ್ವತಶ್ರೇಣಿಯನ್ನು ಬಹುಕಷ್ಟದಿಂದಿಳಿದು ಅಡಿಗಡಿಗೂ ಪ್ರತಿಭಟಿಸಿದ ರೋಮಕರನ್ನು ಯುದ್ಧದಲ್ಲಿ ಸಾವಿರಾರು ಜನರಂತೆ ಕೊಂದು ರೋಮಕರ ದೇಶವಾದ ಇಟಲಿಯನ್ನು ಪ್ರವೇಶಿಸಿದನು ಅಲ್ಲಿ ಟ್ರಸ್‌ಮಿನಿ ಸರೋವರ ಪ್ರಾಂತವು ರೋಮಕ ಯೋಧರ ವಧೆಗೆ ಅನುಕೂಲವೆಂದು ಹ್ಯಾನಿಬಾಲನು ಭಾವಿಸಿದ್ದಂತೆ ರೋಮಕರು ಆ ಪ್ರಾಂತಕ್ಕೆ ಬಂದು ಮೂವತ್ತು ಸಹಸ್ರ ಜನ ಯೋಧರು ನಿಂತಲ್ಲಿಯೇ ಮಡಿದರು ಕೆಲವರು ಸರೋವರದಲ್ಲಿ ಮುಳುಗಿ ಸತ್ತರು, ಎಲ್ಲೋ ಸ್ವಲ್ಪ ಮಂದಿ ಮೃತ್ಯುವಿನ ಬಾಯಿಗೆ ತುತ್ತಾಗದೆ ತಪ್ಪಿಸಿಕೊಂಡರು

ಹ್ಯಾನಿಬಾಲನ ಈ ದಿಗ್ವಿಜಯವನ್ನು ಕೇಳಿ ರೋಮಕರೆಲ್ಲರೂ ನಡುಗಿಹೋದರು ಹ್ಯಾನಿಬಾಲನು ಕಾರಣಾಂತರಗಳಿಂದ ರೋಂ ಪಟ್ಟಣವನ್ನು ಪ್ರವೇಶಿಸದೆ ತನ್ನ ಜನರಿಗೆ ಸ್ವಲ್ಪ ಸುಧಾರಿಸಿಕೊಳ್ಳಲು ಅವಕಾಶಕೊಟ್ಟು, ಅಲ್ಲಿಯ ಕೆಲಜನರನ್ನು ತನ್ನ ಕಡೆ ಸೇರಿಸಿಕೊಂಡು ರೋಮಕರ ಮೇಲೆ ಬೀಳಲು ಮತ್ತೆ ಆರಂಭಿಸಿದನು ರೋಮಕರು ಒಟ್ಟಾಗಿ ಸೇರಿ ಮೇಲೆ ಬೀಳಲು ಹದರಿ ಅಲ್ಲಲ್ಲಿಯೇ ಬದರಿಸುತ್ತ ಸ್ವಲ್ಪ ಕಾಲಕಳೆದು ಬೇಸರಗೊಂಡು ಸುಮಾರು ಎಪ್ಪತ್ತು ಸಹಸ್ರ ಜನ ಸೇರಿ ಕ್ಯೆನೆಯೆಂಬ ಸ್ಥಳದಲ್ಲಿ ಯುದ್ಧಮಾಡಿ ಐವತ್ತು ಅರುವತ್ತು ಸಹಸ್ರ ಜನ ಹತರಾದರು ರಕ್ತಪ್ರವಾಹವು ಹರಿಯಿತು ರೋಂ ಪಟ್ಟಣದ ಮೇಲೆ ಹ್ಯಾನಿಬಾಲನು ನುಗ್ಗಿದ್ದರೆ ರೋಮಕರು ಏನಾಗುತ್ತಿದ್ದರೋ ಕಾಣೆವು ಈ ಯುದ್ಧದಲ್ಲಿ ಸತ್ತ ರೋಮಕ ವೀರ ಭಟರ ಬರಲುಗಳಲ್ಲಿದ್ದ ಉಂಗುರಗಳ ರಾಶಿಗಳನ್ನೇ ಕಾರ್ಥೆಜಿಗೆ ಹಾನ್ನಿಬಾಲನು ಕಳುಹಿಸಿದನು

ಕಾರ್ಥೆಜಿನಿಂದ ಇಂತಹ ವೀರನಿಗೂ ಸಹಾಯ ಒದಗಲಿಲ್ಲ ಹನ್ನೆರಡು ವರ್ಷಕಾಲ ಅದ್ವಿತೀಯನಾಗಿ ಇದಿರಿಲ್ಲದೆ ಇಟಲಿ ದೇಶವನ್ನೆಲ್ಲ ಕೊಳ್ಳೆಹೊಡೆಯುತ್ತ ಸಿಂಹಗಳೆಂದು ಹಸರುಗೊಂಡಿದ್ದ ತನ್ನ ತಮ್ಮಂದಿರ ಬರುವಿಕೆಯನ್ನೇ ಇದಿರುನೋಡುತ್ತಿದ್ದ ಆ ಹ್ಯಾನಿಬಾಲನಿಗೆ ಯಾರಿಂದಲೂ ಯಾವ ಸಹಾಯವೂ ದೊರೆಯದೆ ಹೋಯಿತು. ಕಾರ್ಥೆಜಿನ ಈ ಸಿಂಹವನ್ನು ಇಟಲಿಯಿಂದ ಹೊರಡಿಸಲು ರೋಮಕರಿಗೆ ಅಸಾಧ್ಯವಾಗಲು ಕೊನೆಗೆ ಕಾರ್ಥೆಜನ್ನು ಮುತ್ತಿಗೆ ಹಾಕಲು ಹೊರಟರು

ಆಗ ಕಾರ್ಥೆಜಿನವರು ಹ್ಯಾನಿಬಾಲನ ಸಹಾಯವನ್ನು ಬೇಡಬೇಕಾಯಿತು. ತನ್ನ ಜನ್ಮಭೂಮಿಯ ಜನರು ಎಷ್ಟು ಅಪರಾಧಮಾಡಿದರೂ ಕಾರ್ಥೆಜಿನ ಮೇಲೆ ಮನಸ್ಸಿಟ್ಟು ರೋಮಕರನ್ನು ಅಲ್ಲಿಂದ ಹೊರಡಿಸಲು ಬಂದು ಯುದ್ಧಮಾಡಿದನು.

ಆ ಯುದ್ಧದಲ್ಲಿ ಕಾರ್ಥೆಜಿನವರಿಗೆ ಅಪಜಯವಾದರೂ ರೋಮಕರೇ ಸಮಾಧಾನ ಮಾಡಿಕೊಳ್ಳಲು ಒಪ್ಪಿದರು ಅವರೊಡನೆ ಸಮಾಧಾನ ಮಾಡಿಕೊಳ್ಳುವಂತೆ ಹೇಳಿ ಕಾರ್ಥೆಜಿನ ಆಡಳಿತವನ್ನು ಕ್ರಮಪಡಿಸಿ ಮತ್ತೆ ಯುದ್ಧಮಾಡಲು ಏರ್ಪಡಿಸುತ್ತಿದ್ದನು

ಹ್ಯಾನಿಬಾಲನು ಬದುಕಿರುವವರೆಗೆ ರೋಮಕರಿಗೆ ನಿದ್ದೆ ಕೂಡ ಒರುತಿರಲಿಲ್ಲ ಯಾವುದೋ ಸ್ವಲ್ಪ ಕಾರಣಕ್ಕೆ ಹ್ಯಾನಿಬಾಲನನ್ನು ರೋಂ ಪಟ್ಟಣಕ್ಕೆ ತಂದು ಒಪ್ಪಿಸಬೇಕೆಂದು ರೋಮಕರು ಅಪೇಕ್ಷಿಸಲು ಹ್ಯಾನಿಬಾಲನು ತನ್ನ ಜನ್ಮಭೂಮಿಯನ್ನು ಬಿಟ್ಟು ಇನ್ನೊಂದು ಸಂಸ್ಥಾನಕ್ಕೆ ಹೋದನು ಅಲ್ಲಿಯೂ ಅವನ ಶತ್ರುಗಳು ಬೆನ್ನಟ್ಟಲು ಎಂಟು ವರ್ಷದ ಹುಡುಗನಾಗಿದ್ದಾಗ ಹ್ಯಾನಿಬಾಲನು ತನ್ನ ಪ್ರಾಣವಿರುವವರೆಗೂ ರೋಮಕರೊಡನೆ ಮಾತ್ಸರ್ಯವನ್ನು ಸಾಧಿಸುವೆನು, ಎಂದು ತನ್ನ ತಂದೆಗೆ ಕೊಟ್ಟ ಭಾಷೆಯನ್ನು ಉಳಿಸಿಕೊಳ್ಳಲು ಜತೆಯಲ್ಲಿಯೇ ವಿಷವನ್ನು ಇಟ್ಟುಕೊಂಡಿದ್ದು ಯತ್ನವಿಾರಿ ಬಂದ ವೇಳೆಯಲ್ಲಿ ಅದನ್ನು ಸೇವಿಸಿ ಪ್ರಾಣವನ್ನು ಬಿಟ್ಟನೆನ್ನುವರು ಮಾನುಷ ಚರಿತ್ರೆಯಲ್ಲೆಲ್ಲ ಇವನನ್ನು ಲೋಕೈಕ ವೀರನೆಂದು ಗಣಿಸಿರುವರು

---

ಕಾಲಿಸ್ಟೊ ಮತ್ತು ಆರ್ಕಾಸ್

## ೯೬ ಸಪ್ತಋಷಿ ಮತ್ತು ಧ್ರುವಮಂಡಲ

ಯೂರೋಪ್ ಖಂಡದಲ್ಲಿ ಗ್ರೀಸ್ ಎಂದು ಪ್ರಸಿದ್ಧವಾದ ಒಂದು ದೇಶವಿರುವುದಷ್ಟೆ ಆ ದೇಶದಲ್ಲಿ ಒಹುಕಾಲದ ಹಿಂದೆ ಶೂರರಾದ ಮತ್ತು ಬಹು ಸುಂದರರಾದ ಜನರು ವಾಸವಾಗಿದ್ದರು ಆ ಜನರಿಗೆ ಗ್ರೀಕರೆಂದು ಹೆಸರು ಆ ಗ್ರೀಕರು ತಮ್ಮ ಹಿಂದಿನವರ ವಿಚಾರವಾಗಿ ಬಹು ಕಥೆಗಳನ್ನು ಹೇಳಿಕೊಳ್ಳುತ್ತಿದ್ದರು ಆ ಕಥೆಗಳಲ್ಲಿ ಕಾಲಿಸ್ಟೊವಿನ ಕಥೆಯೊಂದು ಬಹುಕಾಲದ ಹಿಂದೆ ಕಾಲಿಸ್ಟೊ ಎಂಬ ಒಬ್ಬ ಗ್ರೀಕ್ ಸುಂದರಿಯೊಬ್ಬಳಿದ್ದಳು ಅವಳಿಗೆ ಆರ್ಕಾಸ್ ಎಂಬ ಚಿಕ್ಕ ಮಗನೊಬ್ಬನು ಇದ್ದನು ಕಾಲಿಸ್ಟೊ ಬಹು ಒಳ್ಳಯವಳಾಗಿದ್ದುದರಿಂದ ಅವಳನ್ನು ಕಂಡರೆ ಸಾಮಾನ್ಯವಾಗಿ ದೇವತೆಗಳು ಕೂಡ ಕೊಂಡಾಡುತ್ತಿದ್ದರು ಆದರೆ ದೇವತೆಗಳಲ್ಲಿ ಒಬ್ಬಳಿಗೆ ಮಾತ್ರ ಅವಳನ್ನು ಕಂಡರೆ ಆಗುತಿರಲಿಲ್ಲ ಕಾಲಿಸ್ಟೊವಿನ ರೂಪು, ಲಾವಣ್ಯ, ಗುಣ, ಇವು ದೇವಾಧಿದೇವನಾದ ಜ್ಯೂಪಿಟರನನ್ನೇ ಮರುಳು ಮಾಡುವುದೆಂದು ಅವನ ಪತ್ನಿಯಾದ 'ಜೂನೊ' ಭಾವಿಸಿ ಅಸೂಯಾ ಪರಳಾಗಿ ಸುಗುಣಿಯಾದ ಕಾಲಿಸ್ಟೊವಿನ ಸುಂದರಾಕೃತಿಯನ್ನು ನೋಡಿ ಒಂದು ದಿವಸ 'ನೀನು ಕರಡಿಯಾಗು' ಎಂದು ಶಾಪವನ್ನು ಕೊಟ್ಟಳು

ಒಡನೆಯೆ ಕಾಲಿಸ್ಟೊವಿನ ಸೌಂದರ್ಯವು ಮಲಿನವಾಯಿತು ಮೈಯಮೇಲೆಲ್ಲ ಕರಡಿಯ ಮೈಯಮೇಲೆ ಇರುವಂತೆ ದೊಡ್ಡದೊಡ್ಡ ಕೂದಲುಗಳು ಕಾಣಿಸಿಕೊಂಡುವು ಕೋಮಲವಾದ ಕೈಗಳೆರಡೂ ಕರಡಿಯ ಕೈಗಳಾದುವು ಒಂದು

ಕ್ಷಣಮಾತ್ರದಲ್ಲಿ ಕಾಲಿಸ್ಟೊ ಒಂದು ಹೆಣ್ಣು ಕರಡಿಯಾಗಿ ಪರಿಣಮಿಸಿದಳು. ಜೂನೋವಿನ ಶಾಪದಿಂದ ಕರಡಿಯ ರೂಪವನ್ನು ತಾಳಿದರೂ ಕಾಲಿಸ್ಟೊವಿಗೆ ತನ್ನ ರೂಪು ಹೀಗಾಯಿತೆಂಬ ಜ್ಞಾನವು ಇದ್ದಿತು. ಮನುಷ್ಯರ ಹಜ್ಜೆಯ ಸಪ್ಪಳವಾದರೆ ಗಿಡಗಳಿಗೆ ಓಡಿಹೋಗುತಿದ್ದಳು ದುಷ್ಟ ಮೃಗಗಳು ಇದ್ದಕಡೆ ಸೇರುತಿರಲಿಲ್ಲ ಜೇನು, ಹಣ್ಣು ಇವೇ ಅವಳಿಗೆ ಆಹಾರ, ಜಲಜಲನೆ ಹರಿಯುವ ನಿರ್ಮಲವಾದ ನೀರು ಅವಳಿಗೆ ಪಾನ, ನಿಬಿಡವಾದ ಅರಣ್ಯವೇ ಅವಳಿಗೆ ಓಡಾಟದ ಮನೆ, ಮರದ ಪೊಟರೆ ಅಥವಾ ಸ್ವಲ್ಪ ಕತ್ತಲೆಯಾದ ಗುಹಯೇ ಅವಳಿಗೆ ಮಲಗುವ ಕೊಟಡಿ ಹೀಗೆ ಹದಿನೈದು ವರ್ಷಗಳು ಕಳೆದುವು

ಒಂದುದಿವಸ ಕಾಲಿಸ್ಟೊವಿಗೆ ತನ್ನ ಪ್ರಿಯ ಪುತ್ರನು ಏನಾಗಿರುವನೋ ಎಂಬ ಚಿಂತೆಯು ಹುಟ್ಟಿತು ಆದರೆ ಮಗನನ್ನು ನೋಡುವ ಬಗೆ ಹೇಗೆ ? ಬೇಟೆಗಾರರು ಬಂದೊಡನೆ ಕಾಲಿಸ್ಟೊವು ನಾಚಿಕೆಯಿಂದಲೂ ಭಯದಿಂದಲೂ ಅವಿತುಕೊಳ್ಳುತಿದ್ದಳು ಅವರು ಆಡುತ್ತಿದ್ದ ಮಾತು ಕರಡಿಯ ರೂಪದಲ್ಲಿದ್ದ ಕಾಲಿಸ್ಟೊವಿಗೆ ತಿಳಿಯುತಿದ್ದಿತು. ಆದರೆ ಉತ್ತರ ಕೊಡಲಿಕ್ಕೆ ಬಾರದು. ಆದುದರಿಂದ ಮನಸ್ಸಿನಲ್ಲಿಯೇ ಕೊರಗಿ ಬಹು ಕೃಶವಾಗುತ್ತ ಬಂದಳು

ಇತ್ತಲಾಗಿ ಅವಳ ಮಗನಾದ ಆರ್ಕ್ಯಾಸನು ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಹೊಂದುತ್ತ ಬಂದನು ತಾಯಿಯು ಬೇಟೆಯಾಡಲಿಕ್ಕೆ ಹೋಗಿ ಯಾವುದೋ ದುಷ್ಟಮೃಗದ ಕೈಗೆ ಸಿಕ್ಕಿ ಸತ್ತಳೆಂದು ತಿಳಿದು ದುಷ್ಟಮೃಗಗಳನ್ನೆಲ್ಲ ಕೊಂದು ಹಾಕಬೇಕೆಂದು ಬಾಣಪ್ರಯೋಗವನ್ನು ಚೆನ್ನಾಗಿ ಕಲಿತು ಬೇಟೆಗೆ ಹೊರಟನು ಅವನು ಇಟ್ಟ ಗುರಿಯು ತಪ್ಪುತಿರಲಿಲ್ಲ ಒಂದುದಿನ ಬೇಟೆಯಾಡಲು ಗಿಡಗಳ ಮಧ್ಯೇ ನುಗ್ಗಿ ಹೋಗುತ್ತ ಹೇಗೋ ಕಾಲಿಸ್ಟೊ ಇದ್ದೆಡೆಗೆ ಬಂದು ನಿಂತನು. ಕಾಲಿಸ್ಟೊವಿಗೆ ತಪ್ಪಿಸಿಕೊಳ್ಳಲು ಅವಕಾಶವಾಗಲಿಲ್ಲ ಮಗನನ್ನು ಬಿಟ್ಟು ಹದಿನೈದು ವರ್ಷಗಳ ಮೇಲಾಗಿದ್ದರೂ ಆ ಬೇಟೆಗಾರನು ತನ್ನ ಮಗನೆಂದು ತಿಳಿದು ರೆಪ್ಪೆ ಹಾಕದಂತೆ ನೋಡುತ್ತ ನಿಂತಳು ಹೊಡೆಯದೆ ನೋಡುತ್ತ ನಿಂತ ಕರಡಿಯನ್ನು ನೋಡಿ ಬೇಟೆಗಾರನಾದ ಆರ್ಕ್ಯಾಸನು ಮೇಲೆ ಬೀಳುವುದೆಂದು ಒಡನೆಯೇ ಬಾಣವನ್ನು ತೊಟ್ಟನು ಅಷ್ಟರಲ್ಲಿಯೇ ದೇವೋತ್ತಮನಾದ ಜ್ಯುಪಿಟರನು ಪ್ರತ್ಯಕ್ಷನಾಗಿ ಆರ್ಕ್ಯಾಸನ ಕೈಯಲ್ಲಿದ್ದ ಬಾಣವನ್ನು ತೆಗೆದುಕೊಂಡು ತನ್ನ ಹೆಂಡತಿ ಜೂನೊ ಕೊಟ್ಟ ಶಾಪವನ್ನು ಪರಿಹಾರಮಾಡಿ ಕಾಲಿಸ್ಟೊ, ಆರ್ಕ್ಯಾಸ್, ಇಬ್ಬರೂ ಒಟ್ಟಿಗೆ ಸದಾಕಾಲದಲ್ಲೂ ಪ್ರಕಾಶಮಾನರಾಗಿರುವಂತೆ ಅವರನ್ನು ನಭೋಮಂಡಲದಲ್ಲಿ ದಿವ್ಯವಾದ ಸಪ್ತ ಋಷಿ, (The great Bear) ಧ್ರುವ ಮಂಡಲ (The Litte Bear) ಎಂಬ ಕರಡಿಯಾಕಾರವುಳ್ಳ ನಕ್ಷತ್ರಮಾಲೆಗಳನ್ನಾಗಿ ಮಾಡಿದನು

ಈ ವಿಚಾರವನ್ನು ಜುನೊ ತಿಳಿದು ಬಹು ದುಃಖಪಟ್ಟಳು ಮನುಷ್ಯರಾದರೇನು ? ದೇವರಾದರೇನು ? ಅಸೂಯೆ ಪಡತಕ್ಕವರು ಏನಾದರೂ ಒಂದೇ ಪ್ರತಿದಿನವೂ ಪ್ರಕಾಶಿಸುತಿದ್ದ ನಕ್ಷತ್ರಗಳ ಮಾಲೆಗಳಾದ ತಾಯಿಮಕ್ಕಳನ್ನು ನೋಡಿ

ಜೂನೊ ಸಹಿಸಲಾರದೆ ಸಮುದ್ರ ರಾಜನಾದ ' ನೆಟ್ಯೂನ್ ' ಬಳಿಗೆ ಹೋಗಿ ತನ್ನ ದುಃಖವನ್ನೆಲ್ಲ ಹೇಳಿಕೊಂಡು, ಹೇಗಾದರೂ ಮಾಡಿ ಆ ಎರಡು ನಕ್ಷತ್ರಗಳ ಮಾಲಿಕೆಗಳನ್ನು ನಿನ್ನ ಅರಮನೆಗೆ ಸೇರಿಸಬೇಡವೆಂದು ಕೇಳಿಕೊಂಡಳು. ಸಮುದ್ರರಾಜನು ಒಪ್ಪಿದನು. ಆದುದರಿಂದಲೆ ಆ ನಕ್ಷತ್ರ ರಾಶಿಗಳು ಗುರು ಶುಕ್ರರಂತೆ ಅಸ್ತವಾಗದೆ ಸದಾ ಪ್ರಕಾಶಿಸುತ್ತಿರುವುವು

---

## ೯೭ ಭಂಗಾರದ ತುಬಟಿದ ಕಥೆ

### ಮೊದಲನೆಯ ಭಾಗ

ಒಂದಾನೊಂದು ಕಾಲದಲ್ಲಿ ಗ್ರೀಸ್ ದೇಶದಲ್ಲಿ ಆಳುತ್ತಿದ್ದ ರಾಜನೊಬ್ಬನು ನೆಫಿಲೆ ಎಂಬ ಸುಂದರಾಂಗಿಯೊಬ್ಬಳನ್ನು ಮದುವೆಯಾಗಿದ್ದನು. ಅವಳು ಮನೋಹರವಾದ ವಸಂತ ಋತುವಿನ ಸಂಧ್ಯಾ ಕಾಲದ ಮೇಘದಂತೆ ಇದ್ದುದರಿಂದ ಜನರು ಅವಳನ್ನು ನೆಫಿಲೆ ಎಂದು ಕರೆಯುತಿದ್ದರು ಗ್ರೀಕ್ ಭಾಷೆಯಲ್ಲಿ 'ಮೇಘಕ್ಕೂ ನೆಫಿಲೆಯೆಂದು ಹೆಸರು ಅವಳಿಗೆ ಫ್ರಿಕ್ಸಸ್ ಎಂಬ ಮಗನೊಬ್ಬನು, ಹಲ್ಲೆಯೆಂಬ ಮಗಳೊಬ್ಬಳು ರಾಜನೂ ನೆಫಿಲೆಯೂ ಮಕ್ಕಳೊಡನೆ ಸುಖವಾಗಿದ್ದರು ಇವರ ಸುಖಕ್ಕೂ ಸಂತೋಷಕ್ಕೂ ಬೇಸಗೆಯಲ್ಲಿ ಸ್ವಲ್ಪ ಕೊರತೆಯುಂಟಾಗಿದ್ದಿತು ಬೇಸಗೆಯ ಬಿಸಿಲು ಹೆಚ್ಚಿದ ಹಾಗೆಲ್ಲ ನೆಫಿಲೆಯು ಕೃಶಳಾಗುತ್ತ ಬರುತಿದ್ದು ನಿಂತ ಬೇಸಗೆಯಲ್ಲಿ ತೌರುಮನೆಗೆ ಹೋಗಿ ತಂಗಾಳಿಯೊಡನೆಯೂ ಮಳೆಯ ಮೋಡದೊಡನೆಯೂ ಗಂಡನ ಮನೆಗೆ ಬರುತ್ತಿದ್ದಳು ಜನರು ನೆಫಿಲೆಯೂ ಮೇಘಗಳೂ ಸಹೋದರಿಯರು, ಅವರೊಡನೆ ನೆಫಿಲೆಯೂ ಹೋಗಿ ಬರುವುದು ಸಹಜವೆನ್ನುತ್ತಿದ್ದರು

ನೆಫಿಲೆಯು ಹೊರಟುಹೋದಾಗ ರಾಜನಿಗೆ ಬಹು ಬೇಸರವಾಗುತಿದ್ದಿತು ಆ ಮಕ್ಕಳನ್ನು ನೋಡಿಕೊಂಡು ಕಾಲವನ್ನು ಕಳೆಯುತ್ತ ನೆಫಿಲೆಯ ಬರುವಿಕೆಯನ್ನೇ ನಿರೀಕ್ಷಿಸುತಿದ್ದನು. ಹೀಗೆ ರಾಜನು ದುಃಖಿಸುತಿದ್ದ ವೇಳೆಯಲ್ಲಿ ಆ ಊರಿನಲ್ಲಿ ಇದ್ದ ವಿಶಾಲಾಕ್ಷಿಯಾದ ' ಐನೋ ಎಂಬವಳು ರಾಜನ ಮನಸ್ಸನ್ನು ಅಪಹರಿಸಿ ಮದುವೆಯಾದಳು ರಾಜನು ನೆಫಿಲೆಯನ್ನು ಮರೆತುಬಿಟ್ಟನು ಐನೋ ಬಲಮಕ್ಕಳಾದ ಫ್ರಿಕ್ಸಸ್ ಮತ್ತು ಹಲ್ಲೆ ಇವರನ್ನು ಹಿಂಸಿಸ ತೊಡಗಿದಳು ಅವರು ತೊಡುತಿದ್ದ ಉಡಿಗೆ ತೊಡಿಗೆಗಳನ್ನು ಕಿತ್ತುಕೊಂಡು ಚಿಂದಿಯ ಬಟ್ಟೆಗಳನ್ನು ಕೊಟ್ಟು ಕುರುಬರ ಮಕ್ಕಳೊಡನೆ ಆಡಿಕೊಂಡಿರುವಂತೆ ಕುರಿ ಕಾಯುವುದಕ್ಕೆ ಅಟ್ಟುತಿದ್ದಳು ಮಕ್ಕಳು ಇದರಿಂದ ಬಡವಾಗಲಿಲ್ಲ ಸಂತೋಷವಾಗಿ ಬೆಟ್ಟ ಗುಡ್ಡಗಳಲ್ಲಿ ಆಡಿಕೊಂಡು ಇದ್ದು—ಸಂಜೆಗೆ ಮನೆಗೆ ಬಂದೊಡನೆ ಕೊಟ್ಟ ಹಿಟ್ಟನ್ನು ತಿಂದು ಸುಖವಾಗಿ ನಿದ್ರೆಮಾಡುತಿದ್ದುದರಿಂದ ಆರೋಗ್ಯವಾಗಿ ಬೆಳೆಯುತ್ತ ಬಂದರು ಆರೋಗ್ಯವಾದ ಮಕ್ಕಳಿಗೆ ಅನ್ನವಸ್ತ್ರದ ಸೊಗಸು ಬೇಕಾಗಿಲ್ಲ ತಮ್ಮ ತಾಯಿ ಎಲ್ಲಿ ಹೊರಟುಹೋದಳೋ ಎಂಬ ಕೊರತೆ ಮಾತ್ರ ಇದ್ದಿತು

ನೆಫಿಲೆ ಹೊರಟುಹೋಗಿ ಬಹು ದಿನಗಳಾದವು ನೋಡದ ಸುಳಿವೇ ಇಲ್ಲ ಬಿಸಲು ಹೆಚ್ಚುತ್ತ ಬಂದಿತು ಒಂದು ಹನಿ ಮಳೆಯೂ ಬೀಳಲಿಲ್ಲ, ಪೈರುಗಳೆಲ್ಲ ಒಣಗಿದುವು, ಕೆರೆ ನದಿಗಳು ಒಣಗಿದುವು ದನ ಕರುಗಳಿಗೆ ಮೇವಿಲ್ಲ ಜನರಿಗೆ ತಿನ್ನಲಿಕ್ಕೆ ಅನ್ನವಿಲ್ಲ ಕುಡಿಯುವುದಕ್ಕೆ ನೀರಿಲ್ಲ ಕ್ಷಾಮವು ತಲೆದೋರಿತು. ಕ್ಷಾಮ ನಿವಾರಣೆಯಾಗುವುದಕ್ಕೆ ಏನು ಮಾಡಬೇಕೆಂಬುದನ್ನು ತಿಳಿಯಲು ದೊರೆಯು ಶಕುನವನ್ನು ತಿಳಿದು ಬರುವಂತೆ ದೇವಸ್ಥಾನಗಳಿಗೆ ಒಬ್ಬನನ್ನು ಕಳುಹಿಸಿದ ು ಏನೋ, ತನಗೆ ಸಮಯಸಿಕ್ಕಿತೆಂದು ಫ್ರಿಕ್ಸಸ್ ಮತ್ತು ಹೆಲ್ಲೆಯನ್ನು ಕೊಂದುಹಾಕಿದರೆ ಕ್ಷಾಮ ನಿವಾರಣೆಯಾಗುವುದೆಂದು ವರ್ತಮಾನ ತರುವಂತೆ ಅವನಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಕಳುಹಿಸಿದಳು ಆ ಪಾಪಿಯು ಅದೇ ವರ್ತಮಾನವನ್ನು ತಂದನು ದೊರೆಯಾದರೋ ' ಸ್ವಲ್ಪವೂ ನೋಡದೆ ಕೊಂದುಹಾಕಿ ಬಿಡು' ಎಂದನು ಬಲಿಗೆ ಸಿದ್ಧವಾಗುವ ಕುರಿಗಳಿಗೆ ಅಲಂಕಾರಮಾಡುವಂತೆ, ಈ ಎರಡು ಮಕ್ಕಳಿಗೂ ಆ ಪಿಶಾಚಿಗಳು ಅಲಂಕಾರಮಾಡಿ ಬಲಿ ಪೀಠದ ಬಳಿಗೆ ಕರೆದುಕೊಂಡು ಹೋದರು ಪಾಪ ಆ ಮಕ್ಕಳೇನು ಬಲ್ಲರು ? ಮಿಂದು ತಿಂದು ಹೊರಟರು ಎಲ್ಲವೂ ಸಿದ್ಧವಾಗಿದ್ದುವು

ಅಷ್ಟರಲ್ಲಿಯೆ ಭಂಗಾರದ ತುಪ್ಪಟವುಳ್ಳ ಒಂದು ಟಗರು ಆಕಾಶ ಮಾರ್ಗವಾಗಿ ಬಂದು ಬಲಿ ಪೀಠದ ಬಳಿ ನಿಂತಿತು ಫ್ರಿಕ್ಸನು ತತ್‌ಕ್ಷಣವೆ ಅದನ್ನು ಏರಿ ಹಲ್ಲೆಯನ್ನು ಹಿಂದೆ ಕುಳ್ಳಿರಿಸಿಕೊಂಡನು ಟಗರು ಆಕಾಶ ಮಾರ್ಗವಾಗಿ ಹೊರಟಿತು ಕೆಳಗಿದ್ದ ಜನರೆಲ್ಲರೂ ಬಾಯಿಯನ್ನು ತೆರೆದುಕೊಂಡು ಬೆಪ್ಪಾಗಿ ನಿಂತಿದ್ದರು ನೆಫಿಲೆಯು ದೇವಾಧಿದೇವತೆಗಳಿಗೆ ಮೊರೆಯಿಡಲು ಅವರು ಮಕ್ಕಳನ್ನು ಕಾಪಾಡುವುದಕ್ಕೆ ವಿಚಿತ್ರವಾದ ಈ ಟಗರನ್ನು ಕಳುಹಿಸಿದರು ಅದು ಮಕ್ಕಳನ್ನು ಕೂಡಿಸಿಕೊಂಡು ಬೆಟ್ಟ ಗುಡ್ಡಗಳನ್ನೂ ನದೀ ಸಮುದ್ರಗಳೆಲ್ಲವನ್ನೂ ವೇಗವಾಗಿ ದಾಟುತಿರಲು ಆ ವೇಗವನ್ನು ತಡೆಯಲಾರದೆ ಹಲ್ಲೆಯು ಜಾರಿ ಇಕ್ಕಟ್ಟಾದ ಜಲ ಸಂಧಿಯಲ್ಲಿ ಬಿದ್ದು ಮುಳುಗಿಹೋದಳು ಆ ಸ್ಥಳವನ್ನು ಈಗಲೂ ಹಲ್ಲೆಸ್ ಪಾಂಟ್ ಎಂದು ಕರೆಯುವರು

ಹಲ್ಲೆಯು ಬಿದ್ದರೂ ಟಗರಿನ ವೇಗಬೇರೆ ನಿಲ್ಲಲಿಲ್ಲ ಫ್ರಿಕ್ಸಸ್ ಅದರ ಕುತ್ತಿಗೆಯನ್ನು ಬಿಗುವಾಗಿ ಹಿಡಿದಿರಲು, ಸುತ್ತಿಸುತ್ತಿ ಬೇಸತ್ತು ಕೊನೆಗೆ ಕಾಲ್‌ಚಿಸ್ ಎಂಬ ದೇಶದಲ್ಲಿ ಟಗರು ಇಳಿಯಿತು ಆಯಾಸದಿಂದ ಟಗರು ಅಲ್ಲಿ ಸತ್ತು ಹೋಯಿತು ಫ್ರಿಕ್ಸಸ್ ಆ ದೇಶದ ರಾಜಕುಮಾರಿಯನ್ನು ಮದುವೆ ಮಾಡಿಕೊಂಡು ಸುಖವಾಗಿದ್ದನು ಟಗರು ಸತ್ತಮೇಲೆ ಅದರ ಮೇಲಣ ಭಂಗಾರದ ತುಪ್ಪಟವನ್ನು ನಿಬಿಡವಾದ ಮರಗಳ ಮಧ್ಯೇ ಇದ್ದ ಒಂದು ದೊಡ್ಡ ಮರಕ್ಕೆ ತಗುಲಹಾಕಿ, ಅಮೂಲ್ಯವಾದ ಆ ಪದಾರ್ಥವನ್ನು ಕಾದಿರಲು ಭಯಂಕರವಾದ ಸರ್ಪಾಕೃತಿಯುಳ್ಳ ಪಿಶಾಚವನ್ನು ನಿಯಮಿಸಿದನು ಅದು ಎಡೆಬಿಡದೆ ಆ ಅಮೂಲ್ಯವಸ್ತುವನ್ನು ಕಾದಿರುತ್ತಿದ್ದಿತು.



---

## ೯೮. ಭಂಗಾರದ ತುಬಟದ ಕಥೆ (೨)

ಫ್ರಿಕ್ಸಸನು ಕಾಲ್‌ಷಿಸಿನಲ್ಲಿ ಬಹು ದಿನಗಳು ಸುಖವಾಗಿ ಆಳಿದನು

ಅವನ ತರುವಾಯ ಇನ್ನೊಬ್ಬನು ದೊರೆತನಕ್ಕೆ ಬಂದನು ಹೀಗೆಯೇ ಬಹುಕಾಲ ಕಳೆಯಿತು ಕಾಲ್‌ಷಿಸಿನಲ್ಲಿ ಅಮೂಲ್ಯವಾದ ಭಂಗಾರದ ತುಬುಟವು ನಿಂತಿತು ಕಾಲ್‌ಷಿಸಿನ ರಾಜರು ಆ ಅಮೂಲ್ಯವಸ್ತುವನ್ನು ಕಾಪಾಡಿಕೊಳ್ಳುತ್ತ ಬಂದರು ಹೀಗಿರುವಾಗ ಇನ್ನೊಂದು ರಾಜ್ಯದಲ್ಲಿ ಒಬ್ಬಾನೊಬ್ಬ ದೊರೆಯು ಆಳುತಿದ್ದನು ಅವನ ಹೆಸರು ಏಸನ್ ಎಂದು ಅವನಿಗೆ ಒಬ್ಬ ಜೇಸನ್ ಎಂಬ ಒಬ್ಬನೇ ಒಬ್ಬ ಬಾಲಕನಿದ್ದನು ಏಸನ್ ಬಹು ಸಾಧುವಾಗಿದ್ದುದರಿಂದ ಅವನ ತಮ್ಮನು ದೊಡ್ಡ ಸೇನೆಯನ್ನು ಕಟ್ಟಿ ದೊರೆಯನ್ನೂ ಅವನ ಸಂಸಾರವನ್ನೂ ಓಡಿಸಿ ತಾನು ಸಿಂಹಾಸನವನ್ನು ಏರಿದನು

ರಾಜ್ಯಭ್ರಷ್ಟನಾದ ದೊರೆಯು ಮಗುವಾದ ಆ ಜೇಸನನ್ನು ಮಾತ್ರ ರಾಜ ಕುಮಾರನಂತೆ ಬಳೆಯಿಸಿ ಮನುಷ್ಯಮುಖವೂ ಕುದುರೆಯ ಆಕೃತಿಯೂ ಉಳ್ಳ ಷಿರಾನ್ ಎಂಬವನ ಬಳಿ ಧನುರ್ವಿದ್ಯಾಭ್ಯಾಸಕ್ಕೆ ಬಿಟ್ಟನು ಅವನಲ್ಲಿಗೆ ಬಹುಮಂದಿ ರಾಜರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸುತಿದ್ದರು ಷಿರಾನ್ ಇದ್ದ ಗವಿಗೆ ವಿದ್ಯಾಭ್ಯಾಸಕ್ಕೆ ಜೇಸನೂ ಬಂದನು ಷಿರಾನ್ ಬೇಕಾದ ವಿದ್ಯೆಯನ್ನೆಲ್ಲ ಕಲಿಸಿ ಅವನ ಪೂರ್ವವೃತ್ತಾಂತವನ್ನು ತಿಳಿಸಿ ನಿಮ್ಮ ಚಿಕ್ಕಪ್ಪನನ್ನು ಸೋಲಿಸಿ ರಾಜ್ಯವನ್ನು ನಿಮ್ಮ ತಂದೆಗೆ ಕೊಡಿಸುವುದು ನಿನ್ನ ಧರ್ಮವೆಂದು ಶಿಷ್ಯನಿಗೆ ಹೇಳಿದನು ಅದೇ ಮೇರೆ ಜೇಸನ್ ಜೈತ್ರಯಾತ್ರೆಗೆ ಸನ್ನದ್ಧನಾಗಲು ಷಿರಾನ್, ತನ್ನ ಗುಹೆಯನ್ನು ಬಿಟ್ಟು ಬೆಟ್ಟದ ತಪ್ಪಲವರೆಗೂ ಬಂದು, 'ಮಗು, ನಾನು ಹೇಳಿಕೊಟ್ಟ ವಿವೇಕ ವನ್ನು ಮರೆಯಬೇಡ, ಯಾವಾಗಲೂ ಸತ್ಯವನ್ನು ಹೇಳು, ಧರ್ಮಮಾರ್ಗದಲ್ಲಿ ನಡ, ಕೈಯಲ್ಲಾಗದವರಿಗೆ ಸಹಾಯಮಾಡು, ಪ್ರಾಣಿ ಸಾಮಾನ್ಯದಲ್ಲಿ ದಯೆಯನ್ನು ತೋರಿಸು' ಎಂದು ಹೇಳಿ ಹಿಂದಿರುಗಿದನು

ಗುರುವಿನ ಅಪ್ಪಣೆಯನ್ನು ಪಡೆದು ಜೇಸನ್ನನು ಹೊರಟನು ಸ್ವಲ್ಪದೂರ ಹೋಗುವುದರಲ್ಲಿಯೇ ತುಂಬಿದ ಹೊಳೆಯೊಂದು ಸಿಕ್ಕಿತು ಅಲ್ಲಿ ಮುದುಕಿ ಯೊಬ್ಬಳು ಅದನ್ನು ದಾಟಲಿಕ್ಕೆ ಶಕ್ತಿಯಿಲ್ಲದೆ ಚಿಂತಿಸುತ್ತ ನಿಂತಿದ್ದಳು ಜೇಸನ್ನನು ಅವಳನ್ನು ನೋಡಿ ಗುರುವಿನ ಆಜ್ಞೆಯನ್ನು ಸ್ಮರಿಸಿ, 'ಅಜ್ಜಮ್ಮ, ನೀನು ಹೊಳೆಯನ್ನು ದಾಟಬೇಕಾಗಿದ್ದಲ್ಲಿ ನಾನು ದಾಟಿಸುತ್ತೇನೆ, ಬಾರವ್ವ' ಎಂದನು ಮುದುಕಿಯು, 'ಸದ್ಯಃ ಬದುಕಿದೆನಪ್ಪ, ಹೇಗಾದರೂ ಮಾಡಿ ದಾಟಿಸು, ಮಗು' ಎಂದಳು. ಮುದುಕಿಯನ್ನು ಹೆಗಲಮೇಲೆ ಕೂಡಿಸಿಕೊಂಡು ಬಹು ಕಷ್ಟಪಟ್ಟು ಆ ಹೊಳೆಯನ್ನು ದಾಟಿ ಆಚೆ ಕರೆಗೆ ಹೋಗುವುದರಲ್ಲಿ ಜೇಸನ್ನಿನ ಉಸಿರು ಅಡಗುತ್ತ ಬಂದಿತು ಅಚೆಯ ಕರೆಯಮೇಲೆ ಇಳಿಸಿದ ಆ ಆಕೃತಿಯು ಜೂನೋ ಆಗಿರಲು ಜೇಸನ್ನಿಗೆ ಆಶ್ಚರ್ಯವೆಷ್ಟಿರ ಬಹುದು ! ಆಗ ಜೂನೋ ಜೇಸನ್ನನ್ನು ಹರಸಿ, ನಿನ್ನ ಕಾರ್ಯವು ಕೈಗೂಡುವುದು.

ನೀನು ಅಜ್ಜಮ್ಮನಿಗೆ ಮಾಡಿದ ಸಹಾಯವು ವ್ಯರ್ಥವಾಗುವುದಿಲ್ಲ. ನಿನಗೆ ಕಷ್ಟ ಬಂದ ವೇಳೆಯಲ್ಲಿ ನನ್ನನ್ನು ಜ್ಞಾಪಿಸಿಕೊ ' ಎಂದುಹೇಳಿ ಅಂತರ್ಧಾನಳಾದಳು.

ವಿಸ್ಮಿತನಾದ ಜೇಸನ್ನನು ಧೈರ್ಯವನ್ನು ತಾಳಿ ಸಂತೋಷದಿಂದ ಹೊರಡುತಿರುವಾಗ ಅವನ ಕಾಲಿಗೆ ಕಟ್ಟಿಕೊಂಡಿದ್ದ ಪಾದರಕ್ಷೆಗಳಲ್ಲಿ ಒಂದು ನೀರಿನಲ್ಲಿ ಕೊಚ್ಚಿಕೊಂಡು ಹೋಗಿ ಇನ್ನೊಂದು ಕಾಲಿನದು ಮಾತ್ರ ಇದ್ದುದನ್ನು ನೋಡಿದನು ಆಗ ಏನು ಮಾಡಬೇಕು ? ಹಾಗೆಯೆ ಒಂದು ಕಾಲಿಗೆ ಪಾದರಕ್ಷೆಯಿಲ್ಲದೆಯೇ ಹೊರಟನು ಕೊನೆಗೆ ತನ್ನ ಚಿಕ್ಕಪ್ಪನು ಇದ್ದ ಪಟ್ಟಣಕ್ಕೆ ಬಂದು ಅರಮನೆಯ ಒಳಿಗೆ ಹೋಗಲು ದೊರೆಯ ಬಳಿಗೆ ದೂತರು ಕರೆದುಕೊಂಡು ಹೋಗಿ ಬಿಟ್ಟರು. ಜೇಸನ್ನನನ್ನು ನೋಡಿದೊಡನೆಯೆ ದಿಗಿಲಿನಿಂದ ದೊರೆಯ ಮುಖವು ಬೆಳ್ಳಗಾಯಿತು. ಸ್ವಲ್ಪ ದಿನಗಳಿಗೆ ಮುಂಚೆ ಯಾರೋ ಬಂದು ಒಂದು ಕಾಲಿನ ಮೆಟ್ಟನ್ನು ಕಳೆದುಕೊಂಡು ಬರುವ ಯುವಕನೊಬ್ಬನು ನಿನ್ನ ರಾಜ್ಯವನ್ನು ಕಿತ್ತುಕೊಳ್ಳುವನೆಂದು ಹೇಳಿದ್ದರಂತೆ ಅದಕ್ಕೆ ತಕ್ಕಂತೆ ಜೇಸನ ಒಂದು ಕಾಲು ಮೆಟ್ಟು ಹೊಳೆಯಲ್ಲಿ ಕೊಚ್ಚಿಕೊಂಡು ಹೋಯಿತೆಂಬುದು ನಿಮಗೆ ಗೊತ್ತೇ ಇದೆಯಷ್ಟೆ ದೊರೆಯು ಬೇಗ ಚೇತರಿಸಿಕೊಂಡು, ಅಣ್ಣನ ಮಗನ ಯೋಗಕ್ಷೇಮವನ್ನೆಲ್ಲ ವಿಚಾರಿಸಿ ಊಟ ಉಪಚಾರಗಳಿಂದ ವಿಶ್ರಮಿಸಿಕೊಳ್ಳುವಂತೆ ಹೇಳಿ ಊಟ ಮಾಡುತ್ತ ಮಾತನಾಡುತಿರುವ ವೇಳ, ಹಿಂದಣ ಕಾಲದ ಶೂರರ ಪ್ರಸ್ತಾವವನ್ನೆತ್ತಿ ಅಂತಹ ಶೂರರು ಧೀರರು ಈ ಕಾಲದಲ್ಲಿ ಎಲ್ಲಿರುವರು ? ಎಂದು ನಿಟ್ಟುಸಿರು ಬಿಟ್ಟನು ' ಅದೇನು ಹಾಗೆಂದರೆ ! ಅವಕಾಶವಿಲ್ಲ, ಸಮಯ ಬೀಳಲಿ, ಅವರನ್ನು ಮೀರಿಸಿದವರು ಬರುತ್ತಾರೆ ಹಿಂದಣ ಕಾಲದವರೇ ಶೂರರು, ಈ ಕಾಲದವರು ಅಲ್ಲ-ಎನ್ನುವುದು ಶುದ್ಧ ತಪ್ಪು ಮಾತು ನಾನು ಒಪ್ಪಲಾರೆನು ' ಎಂದು ಜೇಸನ್ನನು ಹೇಳಿದನು

ಅದಕ್ಕೆ ದೊರೆಯು ಗಟ್ಟಿಯಾಗಿ ನಕ್ಕು-' ಅಂತಹ ಶೂರರು ಇದ್ದಾರೆಯೆ ? ಹಿಂದಣ ಕಾಲದಲ್ಲಿ ನಡೆದ ಒಂದು ವಿಶೇಷವನ್ನು ಕೇಳಿದ್ದೀಯಾ ? ಭಂಗಾರದ ತುಬುಟದ ಕಥೆಯನ್ನು ಕೇಳಿ ಬಲ್ಲೆಯಾ ? ಆ ತುಬುಟವೊಂದನ್ನು ತಂದರೆ ನಮ್ಮ ಐಶ್ವರ್ಯಕ್ಕೆ ಪಾರವೇ ಇಲ್ಲದಂತಾಗುವುದು ಎಂದು ಫ್ರಿಕ್ಸಸ್, ಹೆಲ್ಲೆ, ಭಂಗಾರದ ತುಬುಟವುಳ್ಳ ಟಗರು, ಈಗ ತುಬುಟವಿರತಕ್ಕ ಸ್ಥಳ, ಹಸಿವು, ಬಾಯಾರಿಕೆ, ನಿದ್ರೆ ಇಲ್ಲದೆ ಹಗಲು ರಾತ್ರಿ ಒಂದೇ ಸಮನಾಗಿ ಕಾದಿರುವ ಸರ್ಪಾಕೃತಿಯುಳ್ಳ ಪಿಶಾಚದ ಕಥೆ ಇವನ್ನೆಲ್ಲ ಹೇಳಿದನು ಆ ಕಥೆಯನ್ನೆಲ್ಲ ಚೆನ್ನಾಗಿ ಕೇಳಿ ಜೇಸನ್ನು ತಟ್ಟನೆ ಎದ್ದು ' ಅಂತಹ ಶೂರರ ವಂಶೀಯರೆಲ್ಲರೂ ಸತ್ತರೆಂದು ತಿಳಿಯಬೇಡ ನಾನು ಹೋಗಿ ಆ ಭಂಗಾರದ ತುಬುಟವನ್ನು ತರುತ್ತೇನೆ ', ಇಲ್ಲವೇ ಆ ಪ್ರಯತ್ನದಲ್ಲಿಯೇ ಪ್ರಾಣವನ್ನು ಬಿಡುತ್ತೇನೆ, ಎಂದು ಶಪಥ ಮಾಡಿದನು ಇದೇ ಆ ದೊರೆಗೆ ಬೇಕಾದುದು ದುರ್ಲಭ ಮತ್ತು ದುಸ್ಸಹವಾದ ಜೈತ್ರಯಾತ್ರೆಗೆ ಜೇಸನ್ನನ್ನು ಕಳುಹಿಸಿ ತಾನು ಸುಖವಾಗಿ ರಾಜ್ಯಭಾರ ಮಾಡಬೇಕೆಂಬುದೇ ಆ ದ್ರೋಹಿ ಚಿಕ್ಕಪ್ಪನ ಆಶೆ

ಜೇಸನ್ನನು ಒಡನೆಯೇ ಒಂದು ಹಡಗನ್ನು ಕಟ್ಟಿದನು. ' ಜೂನೊ ' ಗೆ ಬೇಕಾದ ' ಓಕ್ ' ಮರದಲ್ಲಿಯೆ ಹಡಗಿನ ಮುಖವನ್ನು ಮಾಡಿದನು ಆ ಹಡಗಿಗೆ ' ಆರ್ಗೊ ' ಎಂದು ಹೆಸರಿಟ್ಟನು ' ಆರ್ಗೊ ' ಎಂದರೆ ' ಜಾಗ್ರತೆ ' ಎಂದು ಅರ್ಥ. ಜೇಸನ್ನಿಗೆ ಆಗಾಗ ಜೂನೋ ಪ್ರತ್ಯಕ್ಷಳಾಗಿ ಈ ಮಾರ್ಗವನ್ನು ಬಿಡು, ಅಲ್ಲಿ ಬಂಡೆ ಇದೆ, ಈ ಕಡೆ ಹೋಗು ಎಂದು ಹೇಳುತ್ತಿದ್ದಳಂತೆ ಹಡಗು ಸಿದ್ಧವಾದ ಕೂಡಲೆ ಜೇಸನ್ನನು ' ಇಂತಹ ಮಹಾಕಾರ್ಯವನ್ನು ಕೈಕೊಂಡಿರುವೆನು ನೀವೆಲ್ಲರೂ ಬರ ಬೇಕು ' ಎಂದು ತನ್ನ ಜತೆಯಲ್ಲಿ ವಿದ್ಯಾಭ್ಯಾಸಮಾಡಿದವರಿಗೆ ಹೇಳಿ ಕಳುಹಿಸಿದನು ಆ ಧೀರರೆಲ್ಲರೂ ಬಂದರು ಅವರಿಗೆ ' ಆರ್ಗೋ ನಾಟ್ಸ್ ' ಎಂದು ಹೆಸರಾಯಿತು ಅನೇಕ ವಿಪತ್ತುಗಳನ್ನು ಕಳೆದುಕೊಂಡು ' ಆರ್ಗೋನಾಟರು ' ಕೊನೆಗೆ ಭಂಗಾರದ ತುಬುಟವಿದ್ದ ಕಾಲ್‌ಷಿಸ್ ದೇಶದ ದಡವನ್ನು ಸೇರಿದರು

---

## ೯೯. ಮೂರನೆಯ ಭಾಗ

ಜೇಸನ್ ಅವನ ಮಿತ್ರರು (ಆರ್ಗೊನಾಟರು) ಕಾಲ್‌ಷಿಸ್ ದೇಶದ ದಡವನ್ನು ಸೇರಿದೊಡನೆಯೇ ಅಲ್ಲಿಯ ಜನರು ಇವರನ್ನು ದೊರೆಯಬಳಿಗೆ ಕರೆದುಕೊಂಡು ಹೋದರು ಆ ದೊರೆಗೆ ಇಬ್ಬರು ಮಕ್ಕಳಿದ್ದರು ಅವರಲ್ಲಿ ಕಾಡಿಗೆಗಣ್ಣುಳ್ಳ ಮಿಡಿಯ ಎಂಬ ಹೆಣ್ಣುಮಗಳು ಒಬ್ಬಳು ಅವಳು ಬಹು ಜಾಣೆ, ಎಲ್ಲರೂ ಅವಳನ್ನು ಮಾಯೆಗಾರ್ತಿ ಎಂದು ತಿಳಿದಿದ್ದರು ಜೇಸನ್ನನೂ ಅವನ ಸ್ನೇಹಿತರೂ ದೊರೆಯ ಬಳಿಗೆ ಹೋದಾಗ ದೊರೆಯು ತನ್ನ ಪ್ರಿಯಪುತ್ರಿ ಮಿಡಿಯೊವನ್ನು ತನ್ನ ಬಲಗಡೆ ಸಿಂಹಾಸನದ ಮೇಲೆ ಕೂಡಿಸಿಕೊಂಡು ' ದರಬಾರ್ ' ಮಾಡುತಿದ್ದನು ಜೇಸನ್ ಬಂದೊಡನೆ ಕುಶಲ ಪ್ರಶ್ನೆಗಳನ್ನು ಮಾಡಿ ' ನೀವು ಈ ದೇಶಕ್ಕೆ ಯಾವ ಕಾರ್ಯಗೌರವದ ಮೇಲೆ ಬಂದಿರುವಿರಿ ? ಎಂದು ಕೇಳಲು ಜೇಸನ್ನನು ' ನಾವು ಆ ಭಂಗಾರದ ತುಬುಟವನ್ನು ತೆಗೆದುಕೊಂಡು ಹೋಗಲು ಬಂದಿರುವೆವು ' ಎಂದನು ಅದಕ್ಕೆ ದೊರೆಯು ಗಟ್ಟಿಯಾಗಿ ನಕ್ಕು ' ಓಹೋ ! ಗ್ರೀಸ್‌ದೇಶಕ್ಕೆ, ಈ ಭಂಗಾರದ ತುಬುಟವನ್ನು ತೆಗೆದುಕೊಂಡು ಹೋಗಲು ಬಂದಿರುವಿರೊ ? ಆಃ ಆಗಬಹುದು ? ಅದು ಬಹು ಧೀರರ ಪ್ರಯತ್ನವೇ ಸರಿ! ಆದರೆ ನಾನು ಹೇಳುವ ಮೂರು ಕಾರ್ಯಗಳನ್ನು ಯಾರು ಸಾಧಿಸುವರೊ ಅವರು ಅದನ್ನು ತೆಗೆದುಕೊಂಡು ಹೋಗಬಹುದು ' ಎಂದನು

ದೊರೆಯು ಆಡಿದ ಮಾತಿನ ಜಾಡೆಯಲ್ಲಿ ಭಂಗಾರದ ತುಬುಟವನ್ನು ತೆಗೆದು ಕೊಂಡು ಹೋಗುವುದು ಇವರಿಗಾಗಲಿ ಯಾರಿಗಾಗಲಿ ಸಾಧ್ಯವಲ್ಲವೆಂದು ಕಾಣ ಬಂದಿತು. ಜೇಸನ್ ಹಾಗೂ ಎದೆಗುಂದದೆ ' ಅವು ಯಾವ ಮಹಾಕಾರ್ಯಗಳು ? ತಿಳಿಯಲಪೇಕ್ಷಿಸುತ್ತೇನೆ ' ಎಂದನು ಅದಕ್ಕೆ ದೊರೆಯು ಹೇಳಿದುದೇನೆಂದರೆ— ಮೊದಲನೆಯದು ಬೆಂಕಿಯನ್ನು ಕಾರುವ, ಭಯಂಕರವಾದ ಎರಡು ಹೋರಿಗಳನ್ನು ನೇಗಲಿಗೆ ಹೂಡಿ ನಾಲ್ಕು ಎಕರೆ ಜಮೀನನ್ನು ಉಳುವುದು , ಎರಡನೆಯದು, ಆ ಭೂಮಿಯಲ್ಲಿ ಪಿಶಾಚಸ್ವರೂಪವಾದ ಘಟಸರ್ಪಗಳ ಹಲ್ಲುಗಳನ್ನು ಬಿತ್ತಿ ಪೈರಾಗಿ

ಬರುವ ಯೋಧರನ್ನು ಕೊಲ್ಲುವುದು , ಮೂರನೆಯದು, ಆ ಭಂಗಾರದ ತುಬುಟವನ್ನು ಹಗಲು ರಾತ್ರಿ ಕಾದಿರುವ ರೆಕ್ಕೆಯುಳ್ಳ ಸರ್ಪಪಿಶಾಚವನ್ನು ಕೊಲ್ಲುವುದು , ಈ ಮೂರು ಕಾರ್ಯಗಳನ್ನು ನಿರ್ವಹಿಸಿ ಗ್ರೀಸ್ ದೇಶಕ್ಕೆ ತುಬುಟವನ್ನು ತೆಗೆದು ಕೊಂಡು ಹೋಗಬಹುದು, ಎಂದು ಹೇಳಿ ಜೇಸನ್ನನ್ನು ಕಳುಹಿಸಿಕೊಟ್ಟನು

ದೊರೆಯ ಮಾತನ್ನು ಕೇಳಿ ಜೇಸನ್ನಿಗೆ ಸ್ವಲ್ಪ ಅಧೈರ್ಯ ಹುಟ್ಟಿದರೂ ಅದನ್ನು ದೊರೆಗೆ ತೋರ್ಪಡಿಸದೆ ಅರಮನೆಯಿಂದ ತನ್ನ ಹಡಗು ಬಿಟ್ಟಿದ್ದ ತೀರಕ್ಕೆ ಹೋಗುತ್ತ ಜೂನೊ ಕೊಟ್ಟಿದ್ದ ಭಾಷೆಯನ್ನು ಸ್ಮರಿಸಿಕೊಂಡು ಈಗ ಸಹಾಯ ಮಾಡಿದರೆ ಆದೀತಲ್ಲ, ಎಂದುಕೊಂಡನು ಹಡಗಿಗೆ ಬಂದು ನೋಡುವುದರಲ್ಲಿ, ಅವನ ಆಶ್ಚರ್ಯವೇನೆಂದು ಹೇಳೋಣ ! ಅಲ್ಲಿ ಕಾಲ್‌ಪಿಸ್ ದೊರೆಯ ಮಗಳಾದ ಮಿಡಿಯೂ ಬಂದು ಇದ್ದಳು ಮಿಡಿಯೂ ಮನಸ್ಸಿನಲ್ಲಿ ಜೇಸನ್ನನನ್ನು ಹೇಗಾದರೂ ಮದುವೆಯಾಗಬೇಕೆಂಬ ಅಭಿಲಾಷೆ ಹುಟ್ಟಿದುದರಿಂದ, ಜೇಸನ್ನಿಗೆ ಬೇಕಾದ ಸಹಾಯ ಮಾಡಲು ಸಿದ್ಧಳಾಗಿದ್ದೇನೆಂದು ಹೇಳಲು ಬಂದಿದ್ದಳು

ಜೇಸನ್ನನು ಒಂದೊನೆಡಯೆ ತನ್ನ ಮನೋಭಾವವನ್ನು ಆ ರಾಜ ಕುಮಾರನಿಗೆ ತಿಳಿಸಿ ತನ್ನ ಬಂಧು ಮಿತ್ರರನ್ನು ಬಿಟ್ಟು ಜಯಶಾಲಿಯಾದ ರಾಜ ಕುಮಾರನೊಡನೆ ಅವನ ಪತ್ನಿಯಾಗಿ ಹೂರಡಲು ಸಿದ್ಧಳಾಗಿದ್ದೇನೆಂದು ಹೇಳಿದಳು ಮಿಡಿಯಾ ಆಡಿದ ಮಾತು ಮಿಡಿಯಾಗೇ ಆಶ್ಚರ್ಯವಾಗಿರುವುದು ಮಿಡಿಯಾ ಯತ್ನವೇನು ! ಹಾಗೆ ಮಾತನಾಡುವಂತೆ ಮಾಡಿದವಳು 'ಜೂನೊ' ಜೇಸನ್ನನು ಮಿಡಿಯೆಯ ಸಲಹೆಗೆ ಒಪ್ಪಲು 'ಅವಳು ಒಂದೆರಡು ನಾರು ಬೇರುಗಳನ್ನು ರಾಜಕುಮಾರನಿಗೆ ಕೊಟ್ಟು ಇದರ ಗಂಧವನ್ನು ಮೈಗೆ ಹಚ್ಚಿಕೊಂಡರೆ ಕತ್ತಿ, ಕಗಾರಿ, ಬೆಂಕಿ ಇವುಗಳ ಬಾಧೆ ಇರುವುದಿಲ್ಲ , ತರುವಾಯ ಭಯಂಕರವಾದ ಬೆಂಕಿಯನ್ನು ಕಾರುವ ಹೋರಿ ಗಳನ್ನೂ ಅಲ್ಲ ಉದ್ಭವಿಸುವ ರಾಕ್ಷಸರನ್ನೂ ಕೊಲ್ಲುವುದು ಸುಲಭವಾಗುವುದು ಅವರನ್ನು ಕೊಲ್ಲುವುದಕ್ಕೆ ಇನ್ನೊಂದು ಉಪಾಯವಿರುವುದು , ಅದನ್ನು ಜ್ಞಾಪಕ ದಲ್ಲಿಡು' ಎಂದು ಕಿವಿಯಲ್ಲಿ ಆ ಉಪಾಯವನ್ನು ಹೇಳಿ, ಮಿಡಿಯಾ ಹೂರಟು ಹೋದಳು ಅರಮನೆಯ ಕಡೆ ಹೊರಟ ಆಕೃತಿಯನ್ನು ನೋಡುತ್ತ, ನಾಳೆಯೆ ಕಾರ್ಯದ ವಿಷಯವಾಗಿ ಚಿಂತಿಸುತ್ತ ಜೇಸನ್ನನು ನಿಂತನು

ಬೆಳಗಾಯಿತು ಕಾಲ್ಷಿಸ್‌ನ ಜನಗಳೆಲ್ಲರೂ ಗುಂಪುಗುಂಪಾಗಿ ಆ ಘೋರ ವಾದ ರಣರಂಗಕ್ಕೆ ಹೊರಟರು ಹೋರಿಯನ್ನು ನೋಡಿದೊಡನೆ ಜೇಸನ್ನನು ಸಾಯುವನೆಂದು ತಿಳಿದಿದ್ದರು ಅಖಾಡದಲ್ಲಿ ಜನರು ಸೇರಿದರು ದೊರೆಯೂ ಅವನ ಬಲಗಡೆ ಮಿಡಿಯಯೂ ಬಂದು ಎತ್ತರವಾದ ಪೀಠದ ಮೇಲೆ ಕುಳಿತರು. ಅಲ್ಲಿ ಸೇರಿದ್ದ ಜನರಲ್ಲೆಲ್ಲ ಮಿಡಿಯಾ ಒಬ್ಬಳಿಗೆ ಮಾತ್ರ ಜೇಸನ್ನನು ಗೆಲ್ಲುವನೆಂಬ ಧೈರ್ಯವಿದ್ದಿತೇ ಹೊರತು ಮತ್ತಾರಿಗೂ ಅಂತಹ ಹುಚ್ಚು ನಂಬಿಕೆಗೆ ಕಾರಣವಿರಲಿಲ್ಲ.

ಜೇಸನ್ನನು ಆ ಯುದ್ಧಭೂಮಿಯಲ್ಲಿ ಬಂದು ನಿಲ್ಲಲು ಎರಡು ಹೋರಿಗಳೂ ಗುಟ್ಟರಿಸುತ್ತ ಬೆಂಕಿಯನ್ನು ಕಾರುತ್ತ ಮೂಗಿನ ಹೊಳ್ಳೆಯನ್ನು ಅಗಲಿಸಿಕೊಂಡು

ಮೇಲೆ ಬೀಳಲು ನುಗ್ಗಿದವು ಅವು ನೋಡುವುದಕ್ಕೆ ಬಹು ಭಯಂಕರವಾಗಿದ್ದುವು. ಅವುಗಳ ಗೊರಸುಗಳು ಹಿತ್ತಾಳೆಯಲ್ಲಿ ಮಾಡಿದ್ದುವು ಕೊಂಬುಗಳು ಕಬ್ಬಿಣದ ಈಟಿಗಳಾಗಿದ್ದುವು ಅವು ದಾವುಗಳನ್ನು ಹಾಕಿಕೊಂಡು ನುಗ್ಗುತ್ತಿರವಾಗ ಭೂಮಿಯು ನಡುಗಿಹೋಯಿತು. ಕೆಕ್ಕರಿಸಿದ ಮೂಗಿನ ಹೊಳ್ಳೆಗಳಿಂದ ಹೊರಟ ಬೆಂಕಿಯ ಜ್ವಾಲೆಯು ಅಲ್ಲಿದ್ದವರನ್ನೆಲ್ಲ ಸುಡಲಿಕ್ಕೆ ಆರಂಭಿಸಿತು ಆ ಹೋರಿಗಳನ್ನು ನೀವಾದರೂ ನೋಡಿದ್ದಲ್ಲಿ ಜೇಸನ್ನನು ಬದುಕುವ ಆಶೆಯನ್ನು ನೀವೂ ತೊರೆಯುತ್ತಿದ್ದಿರಿ

ಜೇಸನ್ನಿಗಾದರೊ ಆ ಜ್ವಾಲೆಯು ತಂಗಾಳಿಯಾಗಿಪರಿಣಮಿಸಿತು ಮಿಡಿಯಾ ಕೊಟ್ಟ ದಿವ್ಯೌಷಧದಿಂದ ಆ ಹೋರಿಗಳು ಕುರಿ ಮರಿಗಳಂತೆ ಸ್ವಾಧೀನವಾದುವು ಆಗ ಆ ಎರಡು ಹೋರಿಗಳ ಕೊಂಬುಗಳನ್ನೂ ಹಿಡಿದು ಸೆಳೆದು ಒಂದಕ್ಕೊಂದು ಡಿಕ್ಕಿಯನ್ನು ಹೊಡಿಯಿಸಲು ಅವು ಅಲ್ಲಿಯೆ ಸ್ತಬ್ಧವಾಗಿ ನಿಂತುವು ಸ್ವಲ್ಪವೂ ತಡೆ ಮಾಡದೆ ಅವುಗಳ ಹೆಗಲಮೇಲೆ ನೊಗವನ್ನು ಹೇರಿ ನೇಗಿಲನ್ನು ಹೂಡಿ ಜೇಸನ್ನನು ನಾಲ್ಕು ಎಕರೆ ಜಮೀನನ್ನೂ ಒಂದು ಕ್ಷಣಮಾತ್ರದಲ್ಲಿ ಉತ್ತನು

ಆ ತರುವಾಯ ಪಿಶಾಚದ ಹಲ್ಲುಗಳನ್ನೇ ಬೀಜಗಳನ್ನಾಗಿ ಬಿತ್ತಲು ನಾನು ಹೇಳುವುದೇ ನಿದಾನ—ಹಿಂದುರುಗಿ ನೋಡುವುದರಲ್ಲಿ ಬೀಜವು ಮೊಳತು ಎಲೆಗಾಣಿಸಿಕೊಂಡು ಹೂ ಬಿಟ್ಟು, ಮಹಾರಾಕ್ಷಸರೇ ಫಲಗಳಾಗಿ ಪರಿಣಮಿಸಿದರು ಇವರೆಲ್ಲರೂ ಜೇಸನ್ನಿನಮೇಲೆ ಕತ್ತಿಯನ್ನು ಹಿರಿದು ಕೊಲ್ಲಲು ಹೊರಟರು ಮಿಡಿಯಾ ತನಗೆ ಕಿವಿಯಲ್ಲಿ ಹೇಳಿದ್ದ ಮಾತನ್ನು ಜ್ಞಾಪಿಸಿಕೊಂಡು ಜೇಸನ್ನನು ಹತ್ತಿರ ಬಿದ್ದಿದ್ದ ಒಂದು ಕಲ್ಲನ್ನು ಎತ್ತಿ ಆ ರಾಕ್ಷಸರ ಗುಂಪಿನಲ್ಲಿ ಎಸೆದನು ಆ ಕಲ್ಲು ಬಿದ್ದ ಕೂಡಲೆ ಪ್ರತಿಯೊಬ್ಬ ರಾಕ್ಷಸನೂ ತನ್ನ ಮಗ್ಗುಲಲ್ಲಿ ಇದ್ದ ರಾಕ್ಷಸನು ಎಸೆಯುವನೆಂದು ತಿಳಿದು ತಮ್ಮಲ್ಲಿಯೇ ಹೊಡೆದಾಟ ಬಡಿದಾಟಕ್ಕೆ ತೊಡಗಿ ಬಂದು ಸ್ವಲ್ಪಹೊತ್ತಿನಲ್ಲಿಯೇ ಎಲ್ಲರೂ ಸತ್ತರು ಆ ಭೂಮಿಯಲ್ಲಿ ರಕ್ತದ ಕೋಡಿಯು ಹರಿಯಿತು. ಅಲ್ಲಿ ಸೇರಿದ್ದ ಜನರಿಗೆಲ್ಲ ಬಹು ಸಂತೋಷವಾಯಿತು ಎಲ್ಲರೂ ಜೇಸನ್ನಿನ ಶಕ್ತಿಯನ್ನು ಕೊಂಡಾಡುತ್ತಿದ್ದಾಗ ದೊರೆಯು ಮಾತ್ರ ಕೋಪದಿಂದ ಗಂಟುಮೋರೆ ಹಾಕಿಕೊಂಡು ಸುಮ್ಮನೆ ಕುಳಿತಿದ್ದನು ಮಂತ್ರಶಕ್ತಿಯ ಸಹಾಯವಿಲ್ಲದೆ ಜೇಸನ್ನಿಗೆ ಇದು ಹೇಗೆ ಸಾಧ್ಯವು ? ಇವುಗಳನ್ನೆಲ್ಲ ತಿಳಿದಿದ್ದ ಮಿಡಿಯಾ ಏನಾದರೂ ಸಹಾಯ ಮಾಡಿರುವಳೆ ? ಎಂಬ ಸಂಶಯವು ಹುಟ್ಟಿತು ಇಷ್ಟರಲ್ಲಿ ಜಯಶಾಲಿ ಜೇಸನ್ನನು ಬಂದು ತಾವು ಅಪ್ಪಣೆಕೊಡಿಸಿದ ಎರಡು ಕಾರ್ಯಗಳು ನೆರವೇರಿದಂತಾದುವು , ಮೂರನೆಯ ಕಾರ್ಯವನ್ನು ಸಾಧಿಸುವುದಕ್ಕೆ ಅನುಜ್ಞೆಯನ್ನು ಕೊಡಬೇಕೆಂದು ಕೇಳಿದನು ಆಗ ದೊರೆಯು ' ಈ ಹೊತ್ತು ಬಹಳ ಸಾಹಸವನ್ನು ಮಾಡಿರುವಿರಿ , ಈ ದಿನ ಸುದಾರಿಸಿಕೊಂಡು ನಾಳೆ ಆ ಕಾರ್ಯವನ್ನು ನೆರವೇರಿಸಬಹುದು ' ಎಂದು ಹೇಳಿ ಅರಮನೆಗೆ ಹೊರಟನು

ದೊರಗೆ ತನ್ನ ಮೇಲೆ ಸಂಶಯವುಂಟಾಗಿದೆಯೆಂದು ತಿಳಿದ ಮಿಡಿಯಾ ಸಾಯಂಕಾಲ ಜೇಸನ್ನನು ಇಳಿದಿದ್ದೆಡೆಗೆ ಬಂದು, ಈ ರಾತ್ರಿಯೆ ಆ ಪಿಶಾಚವನ್ನು

ಕೊಂದು ಭಂಗಾರದ ತುಬುಟವನ್ನು ತೆಗೆದುಕೊಂಡು, ನನ್ನೊಡನೆ ನಿನ್ನ ಗ್ರೀಸ್‌ದೇಶಕ್ಕೆ ಹೊರಟುಹೋಗು ಇಲ್ಲದಿದ್ದರೆ—ನಿನಗೂ ನಿಮ್ಮ ಜನರಿಗೂ ತಪ್ಪದೆಕೇಡು ಸಂಭವಿಸು ವುದು ಎಂದು ಹೇಳಿ, ಇನ್ನೇನೋ ಒಂದು ಔಷಧವನ್ನು ಕೊಟ್ಟು, 'ಇದನ್ನು ಹಗಲು ರಾತ್ರಿ ಕಣ್ಣು ತೆರೆದುಕೊಂಡಿರತಕ್ಕ ಸರ್ಪಾಕೃತಿಯುಳ್ಳ ಪಿಶಾಚದ ಕಣ್ಣಿಗೆ ಹಾಕಿ ಭಂಗಾರದ ತುಬಟವನ್ನು ಎತ್ತಿಕೊಂಡು ಬಾರೆಂದು ಜೇಸನ್ನನ್ನು ಕಳುಹಿಸಿದಳು

ಅದೇ ಮೇರೆ ಜೇಸನ್ನನು ಭಂಗಾರದ ತುಬುಟವಿದ್ದ ಕಾಡಿಗೆ ಹೋಗಲು ಸ್ವಲ್ಪ ದೂರ ಹೋಗುವುದರಲ್ಲಿ ಭಂಗಾರದ ಹೊಗೆಯಾಡುತಿದ್ದುದರಿಂದ ಎಲ್ಲೆಲ್ಲೂ ಹೊಂಬ ಣ್ಣವು ಕಾಣಬಂದಿತು ಭಂಗಾರದ ತುಬುಟವು ಎಲ್ಲಿಯೋ ಹತ್ತಿರವೇ ಇರುವುದೆಂದು ತಿಳಿದು ಬಹು ಜಾಗರೂಕತೆಯಿಂದ ಹೋಗುವಾಗ ಪಿಶಾಚದ ಹತ್ತಿರವೇ ಕಾಲಿಡುತ್ತಿ ದ್ದನು. ಅದನ್ನು ನೋಡಿ ಬಹುಧೈರ್ಯವನ್ನು ತಾಳಿ ಬೆಂಕಿಯಂತೆ ಪ್ರಕಾಶಿಸುತ್ತಿದ್ದ ಅದರ ಕಣ್ಣುಗಳಿಗೆ ಮಿಡಿಯಾ ಕೊಟ್ಟ ಔಷಧವನ್ನು ಸುರಿದನು. ಆ ಪಿಶಾಚವು ಹಾಗೆಯೇ ಮುದುರಿಕೊಂಡು ನಿದ್ದೆಮಾಡತೊಡಗಿತು ಜೇಸನ್ನನು ಅದರ ಕುತ್ತಿ ಗೆಯನ್ನು ಕೊಯ್ದು ಮರವನ್ನೇರಿ ಆ ಭಂಗಾರದ ತುಬುಟವನ್ನು ತೆಗೆದುಕೊಂಡು ಅದರ ಬೆಳಕಿನಿಂದ ಒಂದು ಕ್ಷಣಮಾತ್ರದಲ್ಲಿ ತನ್ನ ಹಡಗನ್ನು ಸೇರಿ, 'ಲಂಗರನ್ನು ಎತ್ತಿ, ಮಿಡಿಯೊಡನೆ 'ಆರ್ಗೊ' ವನ್ನು ಗ್ರೀಸ್‌ಕಡೆ ತಿರುಗಿಸಿದನು ಜೂನೋ ಪ್ರಭಾವದಿಂದ ಒಳ್ಳೆಯ ಮಾರುತವು ಬೀಸಲು ಹಡಗು ನಡೆಯಿತು

ಕೆಲವು ದಿವಸಗಳ ತರುವಾಯ ಜೇಸನ್ನನು ಊರನ್ನು ಸೇರಿ ಅವನ ಚಿಕ್ಕಪ್ಪ ನನ್ನು ಓಡಿಸಿ ತಂದೆಯನ್ನು ಮತ್ತೆ ಸಿಂಹಾಸನದ ಮೇಲೆ ಕೂಡಿಸಿ ತಾನು ತಂದ ಎರಡು ಭಾಗ್ಯವನ್ನೂ ಅನುಭವಿಸಿಕೊಂಡು ಬಹುಕಾಲ ಸುಖವಾಗಿದ್ದನು

---

## ೧೦೦ ಮಹಾರಾಣಿ ವಿಕ್ಟೋರಿಯಾ ಚಕ್ರವರ್ತಿನಿ

ಇವರು ಬಹುಕಾಲ ಬ್ರಿಟಿಶ್ ರಾಜ್ಯವನ್ನು ಧರ್ಮದಿಂದ ಆಳಿ ಪ್ರಸಿದ್ಧಿ ಗೊಂಡರು ಇವರ ಕಾಲದಲ್ಲಿ ರಾಜ್ಯವು ಬಹು ವಿಸ್ತಾರಗೊಂಡಿತು ಹಿಂದೂ ದೇಶದರಾಜ್ಯಭಾರವನ್ನು ವಹಿಸಿ ಪ್ರಜೆಗಳಿಗೆ ಅಭಯವನ್ನಿತ್ತು ಕಾಪಾಡಿದ ಮಹಾ ರಾಣಿಯೂ ಇವರೇ! ಇವರ ಕಾಲದಲ್ಲಿ ಪ್ರಜೆಗಳಿಗೆ ವಿಶೇಷ ಸೌಖ್ಯವುಂಟಾಯಿತು. ಬ್ರಿಟಿಷ್ ಸಾಮ್ರಾಜ್ಯವು ಬಹಳವಾಗಿ ವಿಸ್ತಾರಗೊಂಡಿತೆಂದು ಹೇಳಲಿಲ್ಲವೆ ? ವಿಸ್ತಾ ರವಾದ ರಾಜ್ಯಕ್ಕಿಂತಲೂ ಮೇಲಾದ ಇವರ ಗುಣವನ್ನು ಎಲ್ಲರೂ ಕೊಂಡಾಡುವರು.

ಇವರು ಬ್ರಿಟಿಷ್ ಸಿಂಹಾಸನವನ್ನು ಅಲಂಕರಿಸಿದಾಗ ಇವರಿಗೆ ಹದಿನೆಂಟು ವರ್ಷಗಳು ತುಂಬಿದ್ದುವು ಅಷ್ಟು ಚಿಕ್ಕ ವಯಸ್ಸಿನಲ್ಲಿ ಇವರು ಅಂತಹ ಮಹಾ ಪದವಿಗೆ ಬಂದರೂ ಪ್ರಜಾಕ್ಷೇಮಚಿಂತನೆಯಲ್ಲಿ ಬದ್ಧಕಂಕಣರಾದರು. ಪುಣ್ಯವಶ ದಿಂದ ಇವರಿಗೆ ಅನುಗುಣನಾದ ಪತಿಯು ದೊರೆತನು. ಮಹಾರಾಣಿಯವರಿಗೆ

ಪತಿಯಲ್ಲಿ ನಿಜವಾದ ಪ್ರೀತಿ, ಮಕ್ಕಳಲ್ಲಿ ವಿಶೇಷ ವಿಶ್ವಾಸ, ಅವರನ್ನು ಗುಣಾಢ್ಯರನ್ನಾಗಿ ಮಾಡಬೇಕೆಂಬುದರಲ್ಲಿ ಮಹಾರಾಣಿಯವರಿಗೂ ಅವರ ಪತಿಗೂ ವಿಶೇಷ ಆದರ

ಇವರ ಹಿರಿಯ ಮಕ್ಕಳೇ ಬಳಿಕ ಬ್ರಿಟಿಷ್ ಸಾಮ್ರಾಜ್ಯವನ್ನು ವಹಿಸಿದ್ದ ಎಡ್ವರ್ಡ್ ಚಕ್ರವರ್ತಿಯವರು ಇವರು ಜನಿಸಿದಾಗ ಮಹಾ ರಾಣಿಯವರು ತಮ್ಮ ಬಂಧು ವರ್ಗದಲ್ಲೊಬ್ಬರಿಗೆ ಹೀಗೆಂದು ಕಾಗದ ಬರೆದರು —"ನಮ್ಮ ಮಗನು ಯಾರ ಹಾಗೆ ಆಗುವನೋ ಎಂಬ ಭ್ರಾಂತಿ ನನ್ನನ್ನು ಬಹಳವಾಗಿ ಕಳವಳಗೊಳಿಸುತ್ತಿದೆ. ಅವನ ಪರವಾಗಿ ನಾನು ಎಷ್ಟು ಆಶೆಯಿಂದ ಭಗವಂತನನ್ನು ಬೇಡಿಕೊಳ್ಳುತ್ತಿದ್ದೇನೆಂಬುದು ನಿಮಗೆ ಚೆನ್ನಾಗಿ ತಿಳಿದಿದೆ ಮನೋವಾಕ್ಕಾಯಗಳಲ್ಲಿ ಅವನು ತನ್ನ ತಂದೆಯ ಹಾಗೆಯೇ ಆಗಬೇಕೆಂದು ನಾನು ಹಾರೈಸುವುದಲ್ಲದೆ, ನೋಡಿದವರೆಲ್ಲರೂ ಹಾರೈಸುವರೆಂಬುದಕ್ಕೆ ಸಂಶಯವಿಲ್ಲ" ಈ ಕಾಗದವನ್ನು ಓದಿದರೆ ಅವರಿಗೆ ತಮ್ಮ ಪತಿಯ ಪುತ್ರರಲ್ಲಿ ವಾತ್ಸಲ್ಯವೆಷ್ಟಿದ್ದಿತೆಂಬುದು ವ್ಯಕ್ತವಾಗುವುದು

ಮಹಾರಾಣಿಯವರು ಅವರ ಹೆಣ್ಣು ಮಕ್ಕಳನ್ನು ಯಾವ ರೀತಿಯಲ್ಲಿ ತಿದ್ದುತಿದ್ದರೆಂಬುದನ್ನು ಕೇಳಿದರೆ ಆಶ್ಚರ್ಯವಾಗುವುದು ಒಂದು ದಿನ ಅವರ ಇಬ್ಬರು ಹೆಣ್ಣುಮಕ್ಕಳು ಆಡುತಿರುವಾಗ ಮೋಜಗಳಿಗೆ ಕಪ್ಪು ಹಚ್ಚಿ ಬುರಸು ಹೊಡೆಯುವ ಕೆಲಸದ ಹೆಂಗಸೊಬ್ಬಳು ಅರಮನೆಯ ಒಂದು ಕೊಠಡಿಯಲ್ಲಿ ಕುಳಿತಿದ್ದಳು ಅದನ್ನು ನೋಡಿ, ಅವಳ ಬಳಿಗೆ ಹೋಗಿ, 'ಎಲ್ಲಿ, ಆ ಬುರಸು ಕೊಡು, ನೋಡಿ ಕೊಡುತ್ತೇವೆ' ಎಂದು ಮಕ್ಕಳು ಕೇಳಿದರಂತೆ ಅವಳು ಬುರಸನ್ನು ಕೊಡಲು ಬೇಗನೆ ಅವಳ ಕೆನ್ನೆಗೂ ಬಟ್ಟೆಗೂ ಹಚ್ಚಿ ನಗುತ್ತ ನಿಂತರಂತೆ ಆ ಮಕ್ಕಳ ನಗುವನ್ನು ಕೇಳಿ ರಾಣಿಯ ಪತಿಯಾದ ಪ್ರಿನ್ಸ್ ಆಲ್ಬರ್ಟ್ ಬಂದು ಮಕ್ಕಳು ಮಾಡಿದ ಚೇಷ್ಟೆಯನ್ನು ನೋಡಿ ರಾಣಿಗೆ ಹೇಳಿ ಕಳುಹಿಸಿ ಮಕ್ಕಳು ಮಾಡಿದುದನ್ನೆಲ್ಲ ಹೇಳಲು, ರಾಣಿಯು ಆ ಕೆಲಸದ ಹೆಂಗಸನ್ನು ಕರೆಯಿಸಿ ಮಕ್ಕಳು ಮಾಡಿದುದು ತಪ್ಪೆಂದು ಮಕ್ಕಳಿಗೆ ತಿಳಿಸಿ ಮಕ್ಕಳನ್ನು ಅವಳ ಕ್ಷಮಾಪಣೆ ಬೇಡುವಂತೆ ಹೇಳಿ ಅವಳಿಗೆ ಒಂದೊಂದು ಹೊಸ ಲಂಗವನ್ನು ತೆಗೆದುಕೊಡಬೇಕೆಂದು ಆಜ್ಞಾಪಿಸಿದರು ಮಕ್ಕಳು, ಸೇವಕಳ ಕ್ಷಮಾಪಣೆ ಬೇಡುವುದು ಅಪಮಾನಕರವೆಂದು ಎಷ್ಟು ಮೊಂಡಾಟ ಮಾಡಿದರೂ ಬಿಡದೆ ಕ್ಷಮಾಪಣೆಯನ್ನು ಬೇಡಿಸಿಬಿಟ್ಟರಂತೆ ಹೀಗೆ ಬಳೆಯಿಸಿದುದರಿಂದಲೆ ಆ ರಾಜದಂಪತಿಗಳ ಮಕ್ಕಳು ರಾಜ್ಯಭಾರಮಾಡುವುದಕ್ಕೂ ರಾಜರ ಪಟ್ಟಮಹಿಷಿಯರಾಗುವುದಕ್ಕೂ ಯೋಗ್ಯರಾದುದು.

ಇಂತಹ ಮಹಾರಾಣಿ ವಿಕ್ಟೋರಿಯಾ ಚಕ್ರವರ್ತಿನಿಯರ ಜ್ಯೇಷ್ಠಪುತ್ರರೇ ಬಳಿಕ ಬ್ರಿಟಿಷ್ ಸಾಮ್ರಾಜ್ಯವನ್ನು ಧರ್ಮದಿಂದ ಪರಿಪಾಲಿಸುತ್ತಿದ್ದ ಎಡ್ವರ್ಡ್ ಚಕ್ರವರ್ತಿಯವರು (ಎಡ್ವರ್ಡ್ ಚಕ್ರವರ್ತಿಯ ರಾಜ್ಯಭಾರವಾದ ಬಳಿಕ ಪ್ರಕೃತ ಐದನೆಯ ಜಾ. ಚಕ್ರವರ್ತಿಯವರು ಬ್ರಿಟಿಷ್ ಸಾಮ್ರಾಜ್ಯವನ್ನು ಆಳುತ್ತಿರುವರು)

———